ಮನೋಹರ ಗ್ರಂಥಮಾಲೆಯ ೧೩೪ನೆಯ ಕುಸುಮ

# ಪತಿತೋದ್ಧಾರ

( ರಂಗ ಆವೃತ್ತಿ )

( ಮೂರಂಕಿನ ಸಾಮಾಜಿಕ ಸಂಗೀತ ನಾಟಕ )

ಮೂಲ ಲೇಖಕರು :

ಶ್ರೀ. ಹುಯಿಲಗೋಳ ನಾರಾಯಣರಾಯರು

ಲೇಖಕರ ಅನುಮತಿಯಿಂದ

ರಂಗಆವೃತ್ತಿ ತಯಾರಿಸಿದವರು :

ಜಿ. ಬಿ. ಜೋಶಿ.

ಡಿಶೆಂಬರ ೧೯೫೪

ಬೆಲೆ : ೧-೮-೦

ಮನೋಹರ ಗ್ರಂಥ ಪ್ರಕಾಶನ ಸಮಿತಿ, ಧಾರವಾಡ.

ಪ್ರಕಾಶಕರು :

ಜಿ. ಬಿ. ಜೋಶಿ.

ಮನೋಹರ ಗ್ರಂಥಮಾಲೆ.

ಧಾರವಾಡ.



ಈ ನಾಟಕದೊಳಗಿನ ವ್ಯಕ್ತಿಗಳು
ಯಾರನ್ನೂ ಸಮೀಕ್ಷಿಸಿ ಬರೆದವುಗಳಲ್ಲ.
ಹೋಲಿಕೆ ಏನಾದರೂ ಕಂಡರೆ
ಅದು ಕಾಕತಾಳೀಯ.

ಮುದ್ರಕರು :

ಜಿ. ಕೆ. ಕೇಳ್ಕರ

ಕೇಳ್ಕರ ಮುದ್ರಣಾಲಯ,

ಧಾರವಾಡ.

# ಸ್ನೇಹಿತನ ದಿನಚರಿಯಿಂದ

**ಸೂಚನೆ:** —

[ ನಾವಿಬ್ಬರೂ ಒಬ್ಬರಿಗೊಬ್ಬರು ಸ್ನೇಹಿತರು. ನಾನು ಈ ಸ್ನೇಹಿತನ ಮನೆಗೆ ಹೋದಾಗ ಅಕಸ್ಮಾತ್ ಅವನ ದಿನಚರಿ ನನ್ನ ಕಣ್ಣಿಗೆ ಬಿತ್ತು. ಚಹಾ ತಯಾರಿಸಲು ಅವನು ಎದ್ದು ಒಳಗೆ ಹೋದಾಗ, ಸಹಜ ಕುತೂಹಲದಿಂದ ಆ ದಿನಚರಿಯ ಪುಟಗಳನ್ನು ತಿರುವಿ ಹಾಕಿದೆ. ಅಲ್ಲಲ್ಲಿ ಒಂದೆರಡು ಪುಟಗಳನ್ನೂ ಓದಿದೆ. ಮನಸ್ಸು ಹಿಡಿಯುವ ಬರೆವಣಿಗೆ ಇತ್ತು. ಅವನು ಬಂದ ಮೇಲೆ "ತಪ್ಪದೆ ದಿನಚರಿ ಬರೆಯುತ್ತೀಯೇನು ನೀನು?" ಎಂದು ಕೇಳಿದೆ. "ಹೌದು, ಹದಿನೆಂಟು ವರುಷವಾಯಿತು ಬರೆಯಲಿಕ್ಕೆ ಹತ್ತಿ. ಒಂದು ದಿನವೂ ತಪ್ಪಿಲ್ಲ." ಎಂದು ಉತ್ತರ ಕೊಟ್ಟ. "ಹಾಗಾದರೆ ನಿನ್ನ ಐದಾರು ವರ್ಷದ ದಿನಚರಿ ಕೊಡುತ್ತೀಯಾ? ನನಗೆ ನೋಡಬೇಕಾಗಿದೆ." ಎಂದು ಕೇಳಿದೆ. ಚಹಾ ಕುಡಿಯುವದು ಮುಗಿಸಿ, ಒಳಗೆ ಹೋಗಿ ಐದಾರು ಡೈರಿ ಪುಸ್ತಕಗಳನ್ನು ತಂದುಕೊಟ್ಟ. ಏನೋ ನನಗೆ ಬೇಕಾದ ಕೆಲ ದಿನಾಂಕಗಳನ್ನು ತೆಗೆದು ನೋಡುವಾಗ ಈ ನಾಟಕಕ್ಕೆ ಸಂಬಂಧಪಟ್ಟ ವಿಷಯವಿದ್ದ ತೇದಿಗಳನ್ನೂ ಅದರಲ್ಲಿ ಕಂಡೆ. ಓದಿ ನೋಡಿದೆ. ಚೆನ್ನಾಗಿವೆ ಎನಿಸಿತು. ಅವನ ದಿನಚರಿಯಲ್ಲಿ ಈ ಬಗ್ಗೆ ಸಿಕ್ಕಷ್ಟನ್ನೂ ಹುಡುಕಿ ಇದ್ದಕ್ಕಿದ್ದಂತೆ ಇಲ್ಲಿ ಕೊಟ್ಟಿದ್ದೇನೆ. ಅದರಲ್ಲಿಯ ಅಭಿಪ್ರಾಯಗಳಿಗೆ ಅವನೇ ಹೊಣೆ. ಪ್ರಕಟಿಸಲು ಮಾತ್ರ ಒಪ್ಪಿಗೆ ಪಡೆದಿದ್ದೇನೆ. — **ಸಂ.** ]

೨೬-೯-೧೯೪೮

ರವಿವಾರ. ನನ್ನ ಬಾಲ್ಯಸ್ನೇಹಿತನ ಒತ್ತಾಯಕ್ಕಾಗಿ ನಾನೂ ಅಲ್ಲಿಗೆ ಹೋಗಿದ್ದೆ. ಅದು ಅವರದೊಂದು ಕಾರ್ಯಕಾರಿ ಮಂಡಲದ ಸಭೆ. ನನ್ನ ಸ್ನೇಹಿತ ಅದರಲ್ಲಿಯ ಒಬ್ಬ ಸದಸ್ಯ ಎಂದು ಮೊದಲು ನನ್ನ ತಿಳವಳಿಕೆಯಾಗಿತ್ತು. ಮುಂದೆ ಕೆಲಹೊತ್ತಿನ ಮೇಲೆ ಇವನೇ ಆ ಸಂಸ್ಥೆಯ ಕಾರ್ಯದರ್ಶಿ ಎಂದು ತಿಳಿದುಬಂತು. ನನ್ನಿಂದ ಈವರೆಗೂ ಅದನ್ನವನು ಹೇಗೆ ಮುಚ್ಚಿಟ್ಟಿದ್ದನೋ ! ನನ್ನ ಸ್ನೇಹಿತ ಕಾರ್ಯದರ್ಶಿಯಾಗಿದ್ದ ಈ ಸಂಸ್ಥೆಯೆಂದರೆ ಒಂದು ಅಮೆಚೂರ ಸಂಘ. ನಾಟಕ ಬರೆಯಿಸಿ, ರಂಗಭೂಮಿಯ ಮೇಲೆ ತರುವುದಲ್ಲದೆ, ನಾಟಕ, ಅಭಿನಯ, ರಂಗರಚನೆ, ನಾಟಕಕಾರ, ನಟ, ಪ್ರೇಕ್ಷಕ, ದಿಗ್ದರ್ಶಕ ಮೊದಲಾದ ಅಷ್ಟಾಂಗನಾಟ್ಯದ ಬಗ್ಗೆ ತಜ್ಞರಿಂದ ಉಪನ್ಯಾಸಗಳನ್ನೂ ಏರ್ಪಡಿಸಿ ಆ ಬಗ್ಗೆ ಜ್ಞಾನಪ್ರಸಾರದ ಕೆಲಸವನ್ನೂ ಮಾಡುವದು.

ಏಳು ಗಂಟೆಗೆ ಸಂಸ್ಥೆಯ ಕಾರ್ಯಕಲಾಪಗಳು ಪ್ರಾರಂಭವಾದುವು. ನನ್ನ ಸ್ನೇಹಿತ ಏನೇನೋ ಹೇಳುತ್ತಿದ್ದ. ಉಳಿದ ಸದಸ್ಯರೇನೇನೊ ಕೇಳುತ್ತಿದ್ದರು. ಅತ್ತ ಕಡೆಗೇನೂ ನನ್ನ ಲಕ್ಷ್ಯವಿರಲಿಲ್ಲ ಆದರೂ ಆಗೀಗ ನನ್ನ ಕಿವಿಯ ಮೇಲೆ ಬಿದ್ದ ಮಾತುಗಳಿಂದ 'ಇದೊಂದು ಬಾಸ್ಕಳಪಂತರ ಟೋಳಿ ಇರಬೇಕು' ಎಂದು ಅದು ಹೇಗೋ ನನ್ನ ಮನಸ್ಸಿನಲ್ಲಿ ಸುಳಿದುಹೋಯಿತು.

ಇದೇ ಹೊತ್ತಿಗೆ ಚಹಾ, ಅವಲಕ್ಕಿ ಬಂತು.

ಅಷಚಿಡುತ್ತಿರುವಂತೆಯೆ ಮಾತು ನಿಂತವು. ಎಲ್ಲರ ಲಕ್ಷ್ಯ ಹಸಿ ಕೊಬ್ಬರಿ ಹಾಕಿ ಮಾಡಿದ ಸೂಸಲದ ಕಡೆಗೆ ಹೋಯಿತು. 'ಆಹ ! ಏನು ಕೃಷ್ಣಾಚಾರ್ಯರ ಅವಲಕ್ಕಿ !" ಎಂದು ಬಾಯಿ ಚಪ್ಪರಿಸಿ ಚಪ್ಪರಿಸಿ ಕೈ ಸಡಿಲುಬಿಟ್ಟರು. ನನ್ನ ಸ್ನೇಹಿತನೊಡನೆ ನಾನೂ ಕೈಹಾಕಿ ಒಂದೆರಡು ಮುಕ್ಕು ಬಾಯಿಗೆ ಹಾಕುವುದರೊಳಗಾಗಿ ತುಂಬಿದ ಪರಾತ ತೆರವಾಗಿತ್ತು. ಚಹಾದ ಕಪ್ಪು ಎದುರಿಗೆ ಬಂದು ಕುಳಿತಿದ್ದವು.

ಚಹಾ ಕುಡಿದ ನಂತರ ಮತ್ತೆ ಕಾರ್ಯಕಲಾಪಗಳು ಮುಂದರಿದವು. ಬ್ರಿಟನ್ ಪಾರ್ಲಿಮೆಂಟಿನಲ್ಲಿಯೂ ಕೂಡ ಯಾವುದೇ ವಿಷಯವನ್ನು ಮಂಡಿಸುವಾಗ,ಖಂಡಿಸುವಾಗ,ಇಷ್ಟೊಂದು ವಾಗ್ವೈಖರಿ ಕೇಳಸಿಗಲಿಕ್ಕಿಲ್ಲ. ಅಷ್ಟೊಂದು ಏಟಿನಿಂದ, ಇಂಬಿನಿಂದ, ಝೋಕಿನಿಂದ ಪ್ರತಿಯೊಬ್ಬ ಸದಸ್ಯ ಮಾತಿನ ಮಳೆಗರೆಯುತ್ತಿದ್ದ; ನಿಬಂಧನೆಗಳ ಖಡ್ಗವನ್ನು ತಲೆಯಮೇಲೆ ಎತ್ತಿ ಹಿಡಿಯುತ್ತಿದ್ದ. ನನಗನಿಸಿತು "ನನ್ನ ಈ ಸ್ನೇಹಿತನಿಗೇನು ಕೆಲಸವಿರಲಿಕ್ಕಿಲ್ಲವೇ ಇವರಿಂದ ಹೀಗೆಲ್ಲ ಮಾತಾಡಿಸಿಕೊಳ್ಳಲು?" ನನ್ನ ಸ್ನೇಹಿತ ನನ್ನ ಮುಖ ಆಗೀಗ ನೋಡುತ್ತ "ಹೇಗಿದೆ ನೋಡು" ಎಂದು ಕಣ್ಣಿನಿಂದಲೇ ತಿಳಿಸಿ, ಅವರೆಲ್ಲರ ಮಾತುಗಳಿಗೂ ಉತ್ತರ ಕೊಡುತ್ತಿದ್ದ. ಕೆಲ ಹೊತ್ತಾದ ಮೇಲೆ, ಅಂದಿನ ಕಾರ್ಯಕಲಾಪಗಳು ಮುಗಿದ ನಂತರ, ನನ್ನ ಸ್ನೇಹಿತ ಒಂದು ವಿಷಯವನ್ನು ಸಭಾಧ್ಯಕ್ಷರ ಅನುಮತಿ ಪಡೆದು ಚರ್ಚೆಗೆ ಇಟ್ಟ.

ನನ್ನ ಸ್ನೇಹಿತ ಹೇಳಿದ್ದು ಇದು:

"ನಾವೆಲ್ಲ ಕಲೋಪಾಸಕರಾಗಹೊರಟಿದ್ದೇವೆ. ಅದಕ್ಕಾಗಿಯೆ ಈ ಸಂಸ್ಥೆ ಕಟ್ಟಿಕೊಂಡಿದ್ದೇವೆ. ಒಬ್ಬನಿಂದ ಆಗದ್ದನ್ನು ಹತ್ತು ಜನ ಕೂಡಿ ಸಾಧಿಸಬೇಕೆಂದು ಹಂಬಲಿಸುತ್ತೇವೆ. ಇದರಲ್ಲಿ ಹಣ ಗಳಿಸುವ ವ್ಯವಹಾರದೃಷ್ಟಿಯೇನೂ ನಮ್ಮದಿಲ್ಲ. ಈ ಎಲ್ಲ ಸಾಧನೆಗೂ ನಾಟಕ ನಮಗೆ ಬೇಕೆಂದು ಅದನ್ನು ಆಯ್ದುಕೊಂಡಿದ್ದೇವೆ. ಈಗಾಗಲೆ ಮೂರು ನಾಲ್ಕು ನಾಟಕಗಳನ್ನು ಅದೆಷ್ಟೋ ಊರುಗಳಲ್ಲಿ ಆಡಿದ್ದೇವೆ. ಇದರ ಜೊತೆಗೆ ಇನ್ನೊಂದನ್ನು ನಾವು ಮಾಡಬೇಕು ಎನಿಸುತ್ತದೆ. ಪ್ರತಿವರ್ಷವೂ ಒಬ್ಬೊಬ್ಬ ಕಲಾವಿದನನ್ನು — ಅವನು ನಾಟಕಕಾರನೇ ಇರಬಹುದು,ಸಂಗೀತಗಾರನೇ ಇರಬಹುದು, ಶಿಲ್ಪಿಯೇ ಇರಬಹುದು, ಚಿತ್ರಗಾರನೇ ಇರಬಹುದು, ನೃತ್ಯ ವಿಶಾರದನೇ ಇರಬಹುದು, ಜೀವನ ಕಲೆಯರಿತವನೇ ಇರಬಹುದು — ಆದರಿಸಬೇಕು, ಗೌರವಿಸಬೇಕು. ಈ ಪ್ರಘಾತವನ್ನು ಇದೇ ವರ್ಷದಿಂದ ಏಕೆ ಹಾಕಬಾರದು ?"

ಈ ಮಾತನ್ನು ಅಲ್ಲಿಯ ಬಹುತೇಕ ಯಾರೂ ಕೇಳಿರಲಿಲ್ಲ ಎನ್ನುವುದು ಮಾತು ಮುಗಿದ ಮೇಲೆ ನನ್ನ ಸ್ನೇಹಿತನಿಗೆ ಕಂಡುಬಂತು. ಏನೊ, ತಮ್ಮ

ತನ್ನ ಹರಟೆಯಲ್ಲಿ ಕೆಲವರು, "ಏನು ದೊಡ್ಡದು ಹೇಳಿದ ಇಂವ?" "ಯಾಕ ಮಾಡಬೇಕು?" ಎಂದು ಉದಾಸೀನದೃಷ್ಟಿಯನ್ನು ಚೆಲ್ಲಿದವರು ಕೆಲರು, "ಮಾಡೋ ಪ್ರಸಂಗ ಬಂದಾಗ ನೋಡೋಣಂತ. ಈಗs ಯಾಕ?" ಎಂದು ಕೆಲರು. ಸುಮ್ಮನೆ ಕೂತವರಕಿಂತ ಇವರೇ ಬೇಕು ಎನಿಸಿತು. "ನನ್ನನ್ನೇ ಗೌರವಿಸಿ ಪ್ರಾರಂಭಿಸಬಾರದೇಕೆ?" ಎಂದೊಬ್ಬ ಸದಸ್ಯ ನಗೆಯಾಡಿದ. ಅಲ್ಲಿಂದ ತಲೆಗೊಬ್ಬರು ನಾ ಒಂದು ನೀ ಒಂದು ಮಾತು ಜೋಡಿಸಿದರು; ಪ್ರತಿಸೂಚನೆಗಳನ್ನು ಸೂಚಿಸಿದರು; ಅದು ಹಾಗೇಕೆ? ಇದು ಹೀಗೇಕೆ? ಎಂದು ವಾದಿಸಿದರು. ಅಸಡ್ಡೆ ಮಾಡಿ ನಕ್ಕರು. ಆಗ ಒಬ್ಬರು "ವಿಚಾರ ಮಾಡೋಣ. ಅವಶ್ಯ ಮಾಡಬೇಕಾದ ಕೆಲಸ. ಆ ತರಹದ ವ್ಯಕ್ತಿ ಯಾರು ಗೊತ್ತಾಗಲಿ. ಅವರ ದೃಷ್ಟಿಯಲ್ಲೇ ಯಾರಾದರೂ ಇದ್ದರೆ ಹೇಳಬಹುದು." ಎಂದು ಹೇಳಿ ಸಮಾಧಾನ ಉಂಟುಮಾಡಿದರು.

"ಹೌದು, ಹೌದು. ಹಾಗೇ ಆಗಲಿ. ಹೇಳ್ರಿ ಮಿಸ್ಟರ್." ಎಂದು ತಲೆಯಲ್ಲಾಡಿಸಿ ಕೇಳಿದರು ಕೆಲರು.

"ಬೇಕೆಂದರೆ ಹೇಳುತ್ತೇನೆ. ಇದೇ ಗದಗಿನಲ್ಲೇ ಒಂದು ನಾಟ್ಯ ವಿಲಾಸಿಗಳ ಸಂಸ್ಥೆ ೧೫–೨೦ ವರ್ಷ ಕಲಾಸೇವೆಯ ಕೆಲಸ ಮಾಡಿತು. ಇಷ್ಟೇ ಅಲ್ಲದೆ ಒಂದು ಶಿಕ್ಷಣಸಂಸ್ಥೆಗೆ ಜನ್ಮ ಕೊಟ್ಟಿತು ಸಹ. ಪ್ರತಿ ವರ್ಷಕ್ಕೊಂದರಂತೆ ಸತತವಾಗಿ ಹದಿಮೂರು ವರ್ಷ ಹದಿಮೂರು ಹೊಸ ನಾಟಕಗಳನ್ನು ಬರೆಯಿಸಿತು. ಅವನ್ನು ರಂಗದ ಮೇಲೆ ತಂದಿತು. ಆ ಹದಿಮೂರು ನಾಟಕಗಳನ್ನು ಬರೆದವರೂ, ಆ ಸಂಸ್ಥೆ ಕಟ್ಟಿದವರೂ ಇನ್ನೂ ಇದ್ದಾರೆ. ಕರ್ನಾಟಕಕ್ಕೆ 'ಉದಯವಾಗಲಿ' ಎಂದು ಒಂದು ನಾಡಗೀತೆಯನ್ನೂ ಕೊಟ್ಟಿದ್ದಾರೆ. ಕನ್ನಡದಲ್ಲಿಯೇ ಸ್ವತಂತ್ರ ಸಾಮಾಜಿಕ ನಾಟಕಗಳಿಲ್ಲದಾಗ 'ಶಿಕ್ಷಣ ಸಂಭ್ರಮ' 'ಸ್ತ್ರೀಧರ್ಮರಹಸ್ಯ' ಸಾಮಾಜಿಕ ನಾಟಕಗಳನ್ನು ಬರೆದು ಆದ್ಯ ಸಾಮಾಜಿಕ ನಾಟಕಕಾರರಾಗಿದ್ದಾರೆ. ಒಪ್ಪಿಗೆಯಾದರೆ ಇವರಿಂದಲೆ ನಾವು ಪ್ರಾರಂಭಿಸಬಹುದು." ಎಂದು ನನ್ನ ಸ್ನೇಹಿತ ಗಂಭೀರನಾಗಿಯೆ ಹೇಳಿದ. ನನಗೂ ಇದನ್ನು ಕೇಳಿ ಆಶ್ಚರ್ಯವಾಯಿತು. ಈ ವಿಷಯ ನನಗೂ ಹೊಸದೇ.

ವಾತಾವರಣ ಸ್ವಲ್ಪ ಬದಲಾಯಿತು. ಸ್ನೇಹಿತ ಹೇಳಿದ ಮಾತು

ಸದಸ್ಯರ ಮನಸ್ಸಿಗೆ ಮುಟ್ಟಿದವು. "ಒಳ್ಳೇ ವಿಚಾರ. ಆಗಬೇಕು." ಎಂದರು. ನಿರ್ಣಯವೂ ಆಯಿತು.

ನಿರ್ಣಯವನ್ನು ನನ್ನ ಸ್ನೇಹಿತನ ಪಾಲಿಗೇ ಒಗೆದು ಬಂದ ಸದಸ್ಯರೆಲ್ಲ ಕೈಜಾಡಿಸಿಕೊಂಡು ಹೊರಟುಹೋದರು. ನಡೆದ ವಿಷಯವು ಕೂಡ ಅವರ ಮರೆವಿನ ಆಳವನ್ನು ಆಗಲೆ ಸೇರಿಬಿಟ್ಟಂತೆ ಕಂಡಿತು.

ನಾನು ನನ್ನ ಸ್ನೇಹಿತ ಒಬ್ಬರ ಮುಖ ಒಬ್ಬರು ನೋಡಿಕೊಳ್ಳುತ್ತ ಹೊರಟು ಬಂದೆವು.

*  *  *  *

೨೬-೫-೧೯೪೯

ಅಂದು ಸಭೆಯಿಂದ ಹೊರಬಿದ್ದು ಬಂದ ಮೇಲೆ ಮರೆಯಾದ ನನ್ನ ಸ್ನೇಹಿತ ಈ ಹೊತ್ತಿನವರೆಗೂ ಕಾಣಿಸಿಕೊಂಡಿರಲಿಲ್ಲ. ಇಂದು ತಾನಾಗಿಯೆ ನನ್ನ ಮನೆಯ ಕಡೆಗೆ ಬಂದು ಭೆಟ್ಟಿಯಾದ. ಚಹದ ಹೊತ್ತಾಗಿತ್ತು. ಇಬ್ಬರಿಗೂ ಚಹಾ ತಯಾರಿಸಲು ಹೇಳಿಕಳಿಸಿ ಮಾತನಾಡುತ್ತ ಕುಳಿತೆವು.

ನನ್ನ ಸ್ನೇಹಿತ ಅಂದು ಸಭೆಯನ್ನು ನಡೆಯಿಸಿಕೊಂಡು ಹೋದುದನ್ನು ನೆನೆದು ನನಗೇ ಆಶ್ಚರ್ಯವಾಗಿತ್ತು. ನನ್ನ ಸ್ನೇಹಿತನ ಜೀವಿತದ ಅರ್ಥದ ಬಗ್ಗೆಯೇ ಹೊಸತೊಂದು ಬೆಳಕು ನನ್ನಲ್ಲಿ ತೋರಿತ್ತು. "ಇಷ್ಟು ಜನ ಹೀಗೆ ಟೀಕಿದಾಡಿದರೂ, ಮುಖಭಂಗ ಮಾಡಿದರೂ, ಈ ಮನುಷ್ಯ ಹಾಗೇ ಕೆಲಸ ಮಾಡುತ್ತಿರುತ್ತಾನಲ್ಲ. ಇವನಿಗೆ ಯಾವ ಸುಖ ಅದರಿಂದ ಸಿಗುತ್ತಿರಬೇಕು? ಯಾವ ಸ್ವಾರ್ಥ ಅದರಿಂದ ಸಾಧಿಸುತ್ತಿರಬೇಕು? ಏನೇ ಅಂದರೂ ಗಟ್ಟಿಗ!" ಎಂದುಕೊಂಡು ಆ ಹೊಸ ಬೆಳಕಿನಲ್ಲಿ ಅವನನ್ನು ನೋಡಿದೆ. ಅವನ ಮುಖ ಸ್ವಲ್ಪ ಗೆಲುವಾಗಿಯೆ ಕಂಡಿತು. "ಏನು, ಎಲ್ಲಿಗೆ ಬಂದಿದೆ ಗೌರವಿಸುವುದು?" ಎಂದು ಕೇಳಿದೆ.

"ನೀನು ಹೀಗೇ ನೋಡುತ್ತಿರು. ಎಲ್ಲಿಗೆ ಬರುತ್ತದೆಂಬುದು ನಿನಗೇ ಗೊತ್ತಾಗುತ್ತದೆ."

"ನಾನು ಆಗಲಿಕ್ಕಿಲ್ಲ ಎನ್ನುವುದಿಲ್ಲ. ಆದರೆ ಯಾರಿಗೂ ಬೇಡಾದಾಗ – ಈ ಔದಾಸೀನ್ಯದ ಮಧ್ಯದಲ್ಲಿ – ನೀನೇ ಏಕೆ ಆ ಭಾಗ ಹೊತ್ತು ನಡೆಯಬೇಕು? ಇದೇ ನನಗೆ ತಿಳಿಯದಾಗಿದೆ."

"ನೀನು ಕೇಳುವ ಮಾತನ್ನು ನಾನು ನನ್ನನ್ನೂ ಕೇಳಿಕೊಂಡಿದ್ದೇನೆ. ಅದಕ್ಕೆ ಬಂದ ಉತ್ತರ ಒಮ್ಮೊಮ್ಮೆ ಸರಿಯೆನಿಸುತ್ತದೆ; ಒಮ್ಮೊಮ್ಮೆ ಸರಿಯೆನಿಸುವುದಿಲ್ಲ. 'ನಿನ್ನ ಕರ್ಮ' ಎಂದು ಉತ್ತರ ಬಂದಾಗ ನಿರುತ್ತರನಾಗುತ್ತೇನೆ. ಆದರೆ ಅಹಂಕಾರಪ್ರಚೋದನೆಯಿಂದ ಒಳ್ಳೆಯದೂ ಆಗುತ್ತದೆಂದು ನನಗನಿಸುತ್ತದೆ. ಅದು ವಿದ್ಯುತ್ತಿದ್ದಂತೆ. ಸರಿಯಾಗಿ ಉಪಯೋಗಿಸಿದರೆ ಬೆಳಕು ಕೊಟ್ಟೀತು. ತಪ್ಪಾಗಿ ಉಪಯೋಗಿಸಿದರೆ ಸುಟ್ಟೂಬಿಟ್ಟೀತು. ನನ್ನನ್ನು ಇದಕ್ಕೆ ಎಳಸಿದ್ದು ನನ್ನ ಅಹಂಕಾರ. ಅದಕ್ಕೆ ಇದರಲ್ಲಿ ತೃಪ್ತಿ ಇದೆ."

"ಹೌದು. ನೀನು ಹೇಳುವ ಮಾತು ತೀರ ನಿಜ ಇರಬೇಕು."

ಚಹಾ ಬಂತು. ಇಬ್ಬರೂ ಕುಡಿದೆವು.

ಅಲ್ಲಿಂದ ಮತ್ತೆ ನಾನು ಕೇಳಿದೆ. "ಎಲ್ಲಿಯ ವರೆಗೆ ಬಂದಿದೆ?"

ನನ್ನ ಸ್ನೇಹಿತ ಹೇಳಿದ :

"ಅಂದಿನ ಸಭೆಯೇ ನನ್ನ ಅಹಂಕಾರವನ್ನು ಪ್ರಚೋದಿಸಿತು; ನನ್ನಲ್ಲಿ ಛಲವನ್ನು ತುಂಬಿತು. ಕಾರ್ಯೋನ್ಮುಖ ಮಾಡಿತು. ಯಾವಾಗಲೂ ಅಷ್ಟೆ. ಕೆಲಸ ಆಗಬೇಕಾಗಿದ್ದರೆ – ಅಭಿಮಾನ ಕೆರಳಬೇಕು; ಅಹಂಕಾರದ "ಸ್ವಿಚ್ ಆ:ನ್" ಆಗಬೇಕು. ಛಲ ಒಳಹೊಗಬೇಕು.

ಅಂದು ನಿನ್ನನ್ನು ಬಿಟ್ಟಮೇಲೆ, ಆ ಹಳೆ ನಾಟ್ಯಸಂಸ್ಥೆಯ ಒಬ್ಬಿಬ್ಬ ಸದಸ್ಯರನ್ನು ಭೆಟ್ಟಿಯಾದೆ. ರಂಗದ ಮೇಲೆ ಇನ್ನೂ ಬಾರದೆ ಇದ್ದ ನಾಟಕಗಳೇನಾದರೂ ಅವರವು ಇವೆಯೇನೆಂದು ವಿಚಾರಿಸಿದೆ. 'ಅರ್ಧ ಬರೆದ ಒಂದು ನಾಟಕ ಇದೆ. ರಂಗತಾಲೀಮಿಗೆ ಹಚ್ಚಿತ್ತು. ಹೇಳಿದರೆ ಅದನ್ನು ಮುಗಿಸಿ ಕೊಡಬಹುದು' ಎಂದಿಷ್ಟು ಸುದ್ದಿ ಸಿಕ್ಕಿತು. ನಾಟಕಕಾರರ ಹತ್ತರ ಹೋದೆ. ಒಬ್ಬರನ್ನ ಕರಕೊಂಡೂ ಹೋಗಿದ್ದೆ. ಪರಿಚಯ ಆದನಂತರ, ಸುತ್ತುಸುತ್ತಾಡಿ ನಾಟಕದ ಮಾತು ತೆಗೆದು ಅರ್ಧ ಉಳಿದ ನಾಟಕ ಪೂರ್ತಿಮಾಡಲು ಬಿನ್ನವಿಸಿಕೊಂಡೆ. "ನನ್ನ ನಾಟಕಾ ಬರೆಯೋ ಪದ್ಧತಿ ನಿಮಗ ಗೊತ್ತಿಲ್ಲ ಕಾಣ

ಸ್ತದ. ಇತ್ಲಾಗ ರಂಗತಾಲೀಮು ನಡದಿರಬೇಕು; ಬರೆದ ಬರೆದಂತೆ ನಾಟಕ ಕೂಡತಿರಬೇಕು ರಂಗತಾಲೀಮಿನಲ್ಲಿ. ಅಂದರ ನಮ್ಮ ನಾಟಕ ಮುಂಧ ಸಾಗತದ. ನಮ್ಮ ನಾಟಕ ಹುಟ್ಟೋದ ರಂಗತಾಲೀಮಿನಾಗ. ಅದs ಇಲ್ದಿದ್ರ ನಾಟಕ ಹ್ಯಾಂಗ ಮುಗೀಬೇಕು ? ನಮಗೇನು, ಒಮ್ಮೆ ಬರೆದು ಬಿಟ್ಟರಾಯಿತು, ಅದರಾಗಿನ ಒಂದು ಶಬ್ದಾನೂ ಬದಲು ಮಾಡ್ಲಿಕ್ಕಿಲ್ಲ ಅಂಬೊ ಹಟ ಇಲ್ಲ. ಎಷ್ಟೋ ಪ್ರಸಂಗದಾಗ ಬದಲು ಮಾಡಬೇಕಾಗತದ. ನಾಟಕ ಇದು ಒಬ್ಬರದs ಅಲ್ಲ ನೋಡ್ರಿ; ಒಬ್ಬರಿಂದನs ಆಗೂದಿಲ್ಲ. ಸಹಕಾರ ದಿಂದ ಹುಟ್ಟೋ ಕಲಾಕೃತಿ ಇದು. ಅದಕ, ರಂಗತಾಲೀಮು ಹ್ಚ್ಚಿರಿ, ಬರೆದುಕೊಡತೇನಿ." ಎಂದು ಉತ್ತರ ಕೊಟ್ಟರು. ಅವರ ರಂಗತಾಲೀಮಿನ ಪದ್ಧತಿಯನ್ನು ನಾನು ಕೇಳಿ ತಿಳಿದಿದ್ದೆ. ನಮ್ಮ ರಂಗ ತಾಲೀಮಿನ ಪದ್ಧತಿಗೆ ಅವರದಕ್ಕ ಕೂಡೋಹಾಂಗಿರಲಿಲ್ಲ ರಂಗತಾಲೀಮು ಹಚ್ಚೋದಂದರೇನು ಎಂಬುದು ಅನುಭವದಿಂದ ಗೊತ್ತಿದ್ದ ನನಗೆ ಅವರ ಮಾತಿನಿಂದ ಒಂದಿಷ್ಟು ನಿರಾಸೆಯೇ ಆಯಿತು. ಆದರೂ ಧೈರ್ಯಮಾಡಿ ಅವರಿಗೆ ಹೇಳಿದೆ: "ನಾಟಕ ರಂಗದ ಮೇಲೆ ತರುವ ವಿಚಾರ ನಮಗ ಬಿಟ್ಟುಬಿಡಿರಿ. ನೀವು ನಾಟಕಾ ಅಷ್ಟು ದಯಮಾಡಿ ಮುಗಿಸಿಕೊಟ್ಟರೆ ಸಾಕು." ಅವರೂ "ಅಡ್ಡಿ ಇಲ್ಲ. ನೋಡತೇನಿ" ಎಂದರು. ನಾನೂ ಅಷ್ಟಕ್ಕ ಬಿಡಲಿಲ್ಲ. ನಕ್ಷತ್ರಿಕ ಆಗಿ ಅವರಿಗೆ ಬೆನ್ನುಹತ್ತಿದೆ. ನನ್ನ ಕಾಡಾಟಕ್ಕs ಬೇಸತ್ತು, ಅಂತೂ ಕಡೆಗೆ ಆ ನಾಟಕವನ್ನು ಬರೆದು ಮುಗಿಸಿದರು, ಶಕೆ ೧೮೭೧ ವಿರೋಧಿ ಫಾಲ್ಗುಣ ಶುದ್ಧ ಹುಣ್ಣಿವೆಗೆ."

"ಅಂತೂ ಬೆನ್ನುಹತ್ತಿ ನಾಟಕಾ ಮುಗಿಸಿಕೊಂಡಿ. ಬಲು ಗಟ್ಟಿಪಾ ನೀನೂ! ಹೆಸರೇನು ನಾಟಕದ್ದು ?"

"ರಂಗಭೂಮೀ ನ್ಯಾಲs ಬರತದಲ್ಲ. ಆಗs ಗೊತ್ತಾಗತದ ಹೆಸರು."

"ಭಲೋ ಕಲ್ತೀದಲ್ಲ ಜಾಹೀರಾತಿನ ಗತ್ತು! ಹೆಸರು ತಿಳಕೋಬೇಕಾದರ, ಇನ್ನ ನಾಟಕಾ ನೋಡಲಿಕ್ಕೆ ಬರಬೇಕು ಅನ್ನು."

"ಬೇಕಾದರ ಬರಬೇಕಪಾ. ಇದೇನೂ ಅಲ್ಲ, ಖರೇ ನಾಟಕ ಇನ್ನು ಸುರುವು ನೋಡು."

" ಯಾವಾಗ ಸುರುವು ಆದರೇನು, ಸೂತ್ರಧಾರ ನೀ ಮೊದಲ ಬಂದೇ ಬರಬೇಕಲ್ಲ ? "

" ಇರಲಿ ನಡಿ ಹೊರಗ ಹೋಗೋಣು. "

ಇಬ್ಬರೂ ತಿರುಗಾಡಲಿಕ್ಕೆ ಹೊರಟುಹೋದೆವು.

*     *     *     *

೧೦–೧೧–೧೯೫೧

ಉತ್ಥಾನದ್ವಾದಶಿ. ನನ್ನ ಸ್ನೇಹಿತ ಮನೆಯ ವರೆಗೂ ಬಂದು, ನಾನು ಒಲ್ಲೆನೆಂದರೂ ಜುಲುಮೆಯಿಂದ ನನ್ನನ್ನು ಕರೆದುಕೊಂಡು ಹೋದ, ತಮ್ಮ ಸಭೆಗೆ. ಅದು ಹಿಂದೆ ನಡೆದಂತಹದೇ ಒಂದು ಸಭೆ. ಕೆಲ ಹೊಸಮುಖ ಬಂದಿದ್ದವು. ಕೆಲ ಹಳೆಯವೂ ಇದ್ದವು. ಅಂದು ನಾಟಕಕಾರರೇ ಸಭಾಲಂಕಾರರಾಗಿ ಕುಳಿತಿದ್ದರು. ಆ ಓಡಾಟ, ಆ ಗಡಿಬಿಡಿ, ಆ ಪೂಜಾದ್ರವ್ಯಗಳು, ವ್ಯವಸ್ಥೆಯಲ್ಲಿಯ ಆ ಓರಣ, ಆ ಮುಖಗಳ ಮೇಲಿನ ನಗು, ಆ ಮಾತು, ಎಲ್ಲ ಹೊಸ ಉತ್ಸಾಹವನ್ನು ತೋರಿಸುತ್ತಿದ್ದವು.

" ಏನೋ ಸಭೆಯ ಕಳೆಯೆ ಬದಲಾಗಿದೆ. ನಮ್ಮ ಈ ಮಹಾಶಯನಿಗೆ ಎಲ್ಲಾ ಅನುಕೂಲವಾಗಿರಬೇಕು ಈಗ " ಎಂದುಕೊಂಡೇ ಒಳಗೆ ಕಾಲಿಟ್ಟದ್ದಾಗಿತ್ತು.

ಭರ್ಜರಿ ಶಾಲು ಹೊದ್ದಿದ್ದ ಶ್ಯಾಮವರ್ಣದ ಆಚಾರ್ಯರೊಬ್ಬರು ಅಸ್ಪಷ್ಟವಾಣಿಯಲ್ಲಿ ಮಂತ್ರೋಚ್ಚಾರ ಮಾಡುತಿದ್ದರು. ಅಲ್ಲಿ ಸಣ್ಣಪೆಟ್ಟಿಗೆಯೊಂದನ್ನು ರೇಶಿಮೆವಸ್ತ್ರದಿಂದ ಮುಚ್ಚಿ ಮಧ್ಯದಲ್ಲಿಟ್ಟಿದ್ದರು. ಅದರ ಮೇಲೆ ಕೈಬರೆಹದ ಗ್ರಂಥವೊಂದಿತ್ತು. ಅದಕ್ಕೇ ಆಚಾರ್ಯರು ಮಂತ್ರಾಕ್ಷತಿ ಹಾಕುತ್ತಿದ್ದರು. ಧೂಪ - ದೀಪ - ನೈವೇದ್ಯ ಎಲ್ಲಾ ಮುಗಿದ ನಂತರ ನಾಟಕಕಾರರೇ ಆ ಹಸ್ತಪ್ರತಿಯೊಳಗಿಂದ ನಾಂದೀಪದ್ಯವನ್ನೋದಿದರು. ಅಲ್ಲಿಂದ ಪ್ರಸಾದ ಬಂತು. ಅನಂತರ ಸಾಹಿತಿಸದಸ್ಯರೊಬ್ಬರು ನಾಟಕಕಾರರಿಗೆ ಕೆಲ ಪ್ರಶ್ನೆಗಳನ್ನು ಕೇಳಿದರು :

" ನಿಮಗೆ ನಾಟಕ ಬರೆಯಲು ಪ್ರೇರಣೆ ಹೇಗೆ ಬಂತು ? ನೀವು ನಾಟಕ

ಬರೆಯುವುದು ಹೇಗೆ ? ನಿಮ್ಮ ನಾಟಕಗಳು ರಂಗಭೂಮಿಯ ಮೇಲೆ ಬರು ವಾಗ ನಿಮಗೆ ಒಂದ ತೊಡಕುಗಳಾವು ? ಅವನ್ನು ನೀವು ಹೇಗೆ ಬಿಡಿಸಿ ಕೊಂಡಿರಿ ? ನಿಮ್ಮ ಒಂದು ನಾಟಕ ನ್ನು ರಂಗದ ಮೇಲೆ ತರಲು ನಿಮಗೆ ಅವಕಾಶ ಎಷ್ಟು ಬೇಕಾಗುತ್ತಿತ್ತು ? ಆಗಿದ್ದ ರಂಗರಚನೆಯಲ್ಲಿ ನಿಮಗೆ ಏನಾ ದರೂ ಕೊರತೆ ಎನಿಸುತ್ತಿತ್ತೋ...." ಹೀಗೇ ಇನ್ನೂ ಎಷ್ಟೋ ಪ್ರಶ್ನೆಗಳನ್ನು ಕೇಳಿದರು. ನಾಟಕಕಾರರು ಕೆಲಹೊತ್ತು ಧ್ಯಾನಿಸಿ ಆ ಪ್ರಶ್ನೆಗಳಿಗೆಲ್ಲ ಒಂದೊಂ ದಾಗಿ ಉತ್ತರ ಕೊಟ್ಟರು. ಅವರು ಹೇಳುತ್ತಿದ್ದುದನ್ನೆಲ್ಲ ಆ ಸಾಹಿತಿ ಬರೆದು ಕೊಳ್ಳುತ್ತಿದ್ದ. ಅವರದೆಲ್ಲ ಹೇಳುವುದು ಮುಗಿದ ಮೇಲೆ ನನ್ನ ಸ್ನೇಹಿತನೆ ಬಂದಿದ್ದವರಿಗೆಲ್ಲ ಕೃತಜ್ಞತೆಗಳನ್ನರ್ಪಿಸಿದ. ಶ್ಯಾಮವರ್ಣದ ಆಚಾರ್ಯರ ಹೆಸರೆತ್ತಿ ಆಭಾರ ಮನ್ನಿಸಿದ. ಆಗ ಹೇಳಿದ ಅವನ ಮಾತಿನಿಂದ ಅವರೂ ಒಬ್ಬ ಒಳ್ಳೆ ನಟರೆಂಬುದು ನನಗೆ ತಿಳಿದುಬಂತು.

ಸಭಾಕಾರ್ಯ ಮುಗಿದ ನಂತರ ನನ್ನ ಸ್ನೇಹಿತ ಆ ಕೈಬರೆಹದ ಗ್ರಂಥ ವನ್ನು ತೆಗೆದುಕೊಂಡು ತನ್ನ ಮನೆಗೆ ಹೊರಟುಹೋದ. ನಾನೂ ಇತ್ತ ನನ್ನ ಮನೆಗೆ ಹೊರಟುಬಂದೆ.

* * * *

೧೦–೧೨–೧೯೫೧

ಇಷ್ಟೊತ್ತಿಗೆ ನನ್ನ ಸ್ನೇಹಿತ ಭೆಟ್ಟಿಯಾಗದೆ ತಿಂಗಳಾಯಿತು. ಈ ಮಧ್ಯ ದಲ್ಲಿ ನಾಲ್ಕೆಂಟು ಸಲ ಅವನ ಮನೆಗೂ ಹೋಗಿ ಬಂದೆ. ಆವರೂ ದರ್ಶನದ ಲಾಭ ದೊರೆಯಲಿಲ್ಲ. ಎಲ್ಲಿ ಕಾಣದಾಗಿರಬಹುದು ? ಎಂದು ಯೋಚಿಸು ತ್ತಲೇ ಇದ್ದೆ. ಸಾಯಂಕಾಲವಾಗಿತ್ತು. ಇನ್ನು ಹೊರಹೊರಡಬೇಕೆಂದು ಎದು ಕೋಟು ಟೊಪ್ಪಿಗೆ ಹಾಕುತ್ತಿದ್ದೆ. ಅಷ್ಟರಲ್ಲಿ ಹೊರಗಿನಿಂದ ಯಾರೋ ಕರೆದ ಶಬ್ದ ಕೇಳಿಸಿತು. ತಿರುಗಿ ನೋಡಿದೆ. ನನ್ನ ಸ್ನೇಹಿತ ! ಒಳಗೆ ಕರೆದೆ. ಹಾಕಿದ ಕೋಟು ಟೊಪ್ಪಿಗೆ ಕಳೆದಿಟ್ಟೆ. ಸ್ನೇಹಿತನೊಡನೆ ಒಳಗೆ ಬಂದು ಕುಳಿತೆ.

ಸ್ನೇಹಿತನ ಕೈಯಲ್ಲಿ ಆ ಕೈಬರೆಹದ ಪ್ರತಿಯಿತ್ತು. ಮುಖದ ಮೇಲೆ

ಯನಾಕೋ ಚಿಂತೆಯ ಛಾಯೆ ಆವರಿಸಿತ್ತು.

"ತಿಂಗಳಾದರೂ ಭೆಟ್ಟಿಯೇ ಇಲ್ಲಲ್ಲೋ! ಏನಿದು?"

"ಕೆಲಸದಲ್ಲಿದ್ದೆ."

"ಅಂಥಾ ಕೆಲಸೇನಪಾ, ಭೆಟ್ಟಿ ಕೂಡ ಆಗದಂಥಾದು?"

"ಇತ್ತು ಮಹರಾಯಾ. ತಲೀವನ್ಯಾಲ ಹೊತ್ತದ್ದಕ್ಕ ತೇಕಬೇಕಲ್ಲ ಮತ್ತ. ನಾಟಕದ ರಂಗಆವೃತ್ತಿ ಬರಿಯೋದರೊಳಗ ತೊಡಗಿದ್ದೆ. ಅದನ್ನ ಏನೊ ಮಾಡಿ ಬರೆದು ಮುಗಿಸಿದೆ ಖರೆ. ಆದರ ನಾಟಕಕಾರರಿಗೆ ಅದನ್ನೊಮ್ಮೆ ತೋರಿಸಿ ಅವರ ಒಪ್ಪಿಗೆ ಪಡೀಬೇಕಲ್ಲ?"

"ನಡಿಯಲ್ಲ ಹೋಗೋಣು. ಅದಕ್ಯಾಕಿಷ್ಟು?"

"ಅಂತss ಇತ್ಲಾಗ ಬಂದದ್ದು, ನಿನ್ನ ಕರಕೊಂಡು ಹೋಗಲಿಕ್ಕೆ. ನಡಿ ಹಂಗಾದರ ಹೊರಡೋಣು, ಈಗss."

ಇಬ್ಬರೂ ಆದೇ ಹೊತ್ತಿಗೆ ಒಳಗಿನಿಂದ ಬಂದ ಚಹಾ ತೆಗೆದುಕೊಂಡು ಗ್ರಂಥಕರ್ತರ ಮನೆಯ ಕಡೆಗೆ ಹೊರಟೆವು.

ದಾರಿಯಲ್ಲಿ, ಇದೇ ಬರುವ ೧೨-೧-೧೯೫೩ಕ್ಕೇ ಥಿಯೇಟರ್ ಗೊತ್ತು ಮಾಡಿರುವುದಾಗಿಯೂ, ನಾಟಕವನ್ನು ಸಮಾರಂಭದ ಹೊತ್ತಿಗೇ ರಂಗ ಭೂಮಿಯ ಮೇಲೆ ತರುವುದಾಗಿಯೂ, ಸಮಾರಂಭದಲ್ಲಿ ಏನೇನು ಕಾರ್ಯ ಕ್ರಮಗಳು ನಡೆಯಬೇಕೆಂಬುದರ ವಿವರಗಳನ್ನೆಲ್ಲ ದಿಂಗ್ಮಾತ್ರ ಯೋಚಿಸಿ ನಿಶ್ಚಯಿಸಿರುವುದಾಗಿಯೂ, ನಾಟಕದಲ್ಲಿಯ ಪಾತ್ರಗಳನ್ನು ಯಾರು ಯಾರಿಗೆ ಕೊಡಬೇಕೆಂಬುದನ್ನು ಕೂಡ ನಿರ್ಧರಿಸಿರುವುದಾಗಿಯೂ, ಸಮಾರಂಭದ ಹೊತ್ತಿಗೇ ಗ್ರಂಥಕರ್ತರ ಬಗ್ಗೆ ವ್ಯಕ್ತಿಪರಿಚಯದ ಒಂದು ಕಿರಿಹೊತ್ತಿಗೆಯನ್ನು ಹೊರಕ್ಕೆ ತರಬೇಕಾಗಿಯೂ, ಯಾರು ಯಾರನ್ನು ಆ ಹೊತ್ತಿಗೆ ಕರೆಯಿಸಬೇಕು, ಯಾವಯಾವ ವಿಷಯಗಳ ಮೇಲೆ ಮಾತನಾಡಿಸಬೇಕು – ಮೊದಲಾದ ತನ್ನ ತಲೆಯಲ್ಲಿ ತುಂಬಿಕೊಂಡಿದ್ದ ನೂರೆಂಟು ವಿಚಾರಗಳನ್ನೆಲ್ಲ ಗ್ರಂಥಕರ್ತರ ಮನೆ ಬರುವವರೆಗೂ ನನ್ನೆದುರಿಗೆ ತೋಡಿಕೊಂಡ. ಎಲ್ಲ ಕೇಳಿಕೊಂಡೆ. ಕೇಳಿ ಕೊಂಡಷ್ಟೂ 'ಈ ವ್ಯಕ್ತಿಗೆ ಏನೆನ್ನಬೇಕು! ಇಲ್ಲದ ಭಲ ಹೊಗಿಸಿಕೊಂಡು ಒದ್ದಾಡುತ್ತಿದ್ದಾನಲ್ಲಾ ಪಾಪ!' ಎನಿಸಿತು. ಇದು ನನಗನಿಸಿದ್ದು. ಆತನಿ ಏನೆನಿಸುತ್ತಿತ್ತೋ ದೇವರೇ ಬಲ್ಲ!

ಗ್ರಂಥಕರ್ತರು ಮನೆಯಲ್ಲಿಯೇ ಇದ್ದರು ನಾವು ಹೋದಾಗ. ಒಂದು ಖಾದಿ ದೋತರ, ಒಂದು ಖಾದಿ ಪೈರಣು ಹಾಕಿಕೊಂಡು ಬಕ್ಕತಲೆಯ ಮೇಲೆ ಕೈಯಾಡಿಸುತ್ತ ಕುಳಿತವರು ನಮ್ಮನ್ನು ನೋಡಿ "ಬರ್ರಿ, ಬರ್ರಿ" ಎಂದು ತಮ್ಮ ಹತ್ತಿರವೇ ಕರೆದು ಕೂಡಿಸಿಕೊಂಡರು. ತಲೆಯ ಮೇಲಿನ 'ಸಂಜಾಪು' ಕಳೆದ ತಲೆಮಾರಿನ ಪ್ರತೀಕವಾಗಿ ಬೆಳ್ಳಗೆ ಮಿಂಚುತ್ತಿತ್ತು. ಮುಖಕ್ಕೆಲ್ಲ ಎದ್ದು ಕಾಣುವ ಉದ್ದನ್ನ ಮೂಗು ಜಕ್ಕಣಾಚಾರ್ಯರ ಶಿಲ್ಪಮೂರ್ತಿಗಳ ಮೂಗನ್ನೇ ಹೋಲುತ್ತಿತ್ತು. ವಯಸ್ಸಾಗಿದ್ದರೂ ಅಚ್ಚಳಿಯದೆ ಇದ್ದ ದಂತಪಂಕ್ತಿ ತರುಣರನ್ನೂ ನಾಚಿಸುವಂತಿದ್ದವು. ತಮ್ಮ ವಯಸ್ಸಿನಲ್ಲಿ ಚೆಲುವರಾಗಿಯೇ ಇರಬೇಕು ಇವರು, ಎನಿಸಿಬಿಡುತ್ತಿತ್ತು ನೋಡಿದ ಕೂಡಲೆ.

ನನ್ನ ಸ್ನೇಹಿತ ಸ್ವಲ್ಪ ತಡವರಿಸುತ್ತಲೆ ಮಾತು ಪ್ರಾರಂಭಿಸಿದ. ಏನೆನ್ನುತ್ತಾರೋ ಎನ್ನುವ ಭಯ ಅವನ ದನಿಯಲ್ಲಿ ಕಂಪನ ತಂದಿತ್ತು.

"ನಾಟಕದ ವಿಷಯಕ್ಕೆ ಸ್ವಲ್ಪ ಮಾತಾಡಿಕೊಂಡು ಹೋಗಬೇಕೆಂದು ಬಂದಿದ್ದೆ. ಮುಂದಿನ ತಿಂಗಳಲ್ಲೇ ಅದನ್ನು ರಂಗಭೂಮಿಯ ಮೇಲೆ ತರಬೇಕೆಂದು ಮಾಡಿದ್ದೇವೆ. ತಮ್ಮ ಸಲಹೆ ಸೂಚನೆಗಳನ್ನು........"

"ಒಂದೇ ತಿಂಗಳದಾಗ ನಾಟಕಾ ಮಾಡತೀರಿ ?! ನನಗೇನೊ ಸ್ವಲ್ಪ ಕಠಿಣ ಕಾಣಸತದ. ನೋಡ್ರಿ, ಅದು ನಿಮ್ಮ ಧೈರ್ಯದ ಮಾತು. ಸುಮ್ಮನೆ ನೋಡಿದವರು ಬೈಯುವಂತಾಗಬಾರದು ಇಷ್ಟೆ. ನಿಮ್ಮ ನಟರು ಹೇಗಿದ್ದಾರೋ ನನಗ ಗೊತ್ತಿಲ್ಲ ಮತ್ತ. ಸುಶಿಕ್ಷಿತರಇ ಇರತಾರ ಅಂದಮ್ಯಾಲ, ಆದರೂ ಆಗಬಹುದು. ನಮ್ಮಕಾಲಕ್ಕ, ನಮ್ಮ ಒಂದು ನಾಟಕ ರಂಗಭೂಮಿಯ ಮ್ಯಾಲ ಬರಬೇಕಾತೂ ಅಂದರ ಕನಿಷ್ಟ ಹನ್ನೊಂದು ತಿಂಗಳ, ಇಲ್ಲ ಒಂದು ವರ್ಷ ಬೇಕಾಗತಿತ್ತು. ಇನ್ನ ಆಗಿನ ಪರಿಸ್ಥಿತೀನೆ ಬ್ಯಾರೆ ಇತ್ತು, ಆ ಮಾತು ಬ್ಯಾರೆ. ಈಗೆಲ್ಲ ಪುಷ್ಕಳ ಸುಧಾರಿಸೇದ ಏನ್ರೆಪಾ. ನಿರಕ್ಷರ ಮಂದೀ ಸಂಗ್ತೀಲೆ ನಾವು ಗುದ್ದ್ಯಾಡಬೇಕಾಗ್ತಿತ್ತು. ನಾಟಕದ ಮಾತು, ಅಂದ ಅಂದಇ ಬಾಯಿಪಾಠ ಆಗಬೇಕು. ಅಂದಮ್ಯಾಲ ಅಷ್ಟು ದಿವಸ ಹಿಡಿಯೋದಇ. ಈಗ ಹಾಂಗಿಲ್ಲ. ಪಾತ್ರ ಹಾಕುವವರು ಸುಶಿಕ್ಷಿತರು, ತಿಳಿವಳಿಕೆಯವರು. ಅಭಿನಯ ಕಲೆ ಗೊತ್ತಿದ್ದವರು. ನಾಟಕಾ ತಾವಇ ಓದಿ ತಿಳಕೊಂಬೋ ಅಂಥ

ವರು. ಅವರಿಗೆ ಯಾರೇನು ಹೇಳೋದು ಅಷ್ಟೊಂದು ಬೇಕಾಗೂದಿಲ್ಲ....
ಅಲ್ಲ, ನಾನೂ ಬಹಳ ಮಾತಾಡಿದ್ನೆಲ್ಲ. ನಿಮಗ ಮತ್ತೇನಾರ ಬ್ಯಾರೆ ಕೇಳೋ
ದಿತ್ತೇನು?" ಎಂದು ನನ್ನ ಸ್ನೇಹಿತನಿಗೆ ಬೇಕಾದ ಮಾತುಗಳನ್ನೇ ಹೇಳಿ
ದಾರಿಯನ್ನು ಸುಗಮ ಮಾಡಿಕೊಟ್ಟರು. ನನ್ನ ಸ್ನೇಹಿತನ ಮುಖದ ಮೇಲೆ
ಆತ್ಮವಿಶ್ವಾಸದ ನಗೆ ಮೂಡಿತು. ಇನ್ನು ಬೇಕಾದ ಮಾತನ್ನು ಕೇಳಬಹು
ದೆಂಬ ಧೈರ್ಯ ಬಂತು.

"ರಂಗಭೂಮಿಯ ಸಲುವಾಗಿ ನಾಟಕದಲ್ಲಿ ಸ್ವಲ್ಪ ಹೆಚ್ಚುಕಡಿಮೆ
ಮಾಡಿಕೊಳ್ಳಬೇಕಾಗುತ್ತದೆ. ಅದಕ್ಕೆ ಹೇಗೆ ಮಾಡಬೇಕು?" ಎಂದು ಕೇಳಿದ.

"ಹೌದು, ರಂಗಭೂಮಿಗೆ ಹೊಂದಿಕೆ ಆಗೋ ಹಾಂಗ ನಾಟಕ ಹೆಚ್ಚು
ಕಡಿಮೆ ಮಾಡಿಕೊಳ್ಳಾಕಬೇಕಾಗತದ. ಬರೆದ್ಹಾಂಗನ ನಾಟಕಾ ಆಡ್ಲಿಕ್ಕೇ ಬರೂ
ದಿಲ್ಲ. ಮತ್ತು ಆಡಿದರ ನೆಟ್ಟಗೂ ಆಗೂದಿಲ್ಲ. ಇದು ನನ್ನ ಅನುಭವಕ್ಕ
ಬಂದ ಮಾತು." ಎಂದು ಅವರಿಂದ ಉತ್ತರ ಬಂತು.

ನನ್ನ ಸ್ನೇಹಿತನ ಮುಖ ನೋಡಿದರೆ– ಇನ್ನೇನು ಎದ್ದು ಕುಣಿಯುವ
ದೊಂದೇ ಬಾಕಿ ಎನ್ನುವಷ್ಟು ಹಿಗ್ಗಿತ್ತು. ತಲೆ, ಪರ್ವತದ ಭಾರ ಇಳಿದಷ್ಟು
ಹಗುರಾಗಿರಬೇಕು. ಯಾಕೆಂದರೆ ಈ ಅನುಭವವೇ ಅವನಿಗೆ ಹೊಸದಿರಬೇಕು.
ಅವನೇ ಹಿಂದಕ್ಕೆ ಒಂದೆರಡು ಸಲ ನನ್ನೆದುರಿಗೆ ಹೇಳಿದ ಅನುಭವ ನನ್ನ ನೆನ
ಪಿಗೆ ಬಂತು.

ಈ ನಾಟಕಾ ಮಾಡಿಸುವ ಹುಚ್ಚು ಎಂದಿನಿಂದಲೂ ನನ್ನ ಸ್ನೇಹಿತನಿಗೆ
ಇದ್ದೇ ಇತ್ತು. ಹಿಂದಕ್ಕೆ ಹಾಗೆ ಮಾಡಿಸಿದಾಗ ಗ್ರಂಥಕರ್ತನ ನಾಟಕದಲ್ಲಿಯ
ಒಂದು ಅಕ್ಷರವನ್ನೂ ಹೆಚ್ಚು ಕಡಿಮೆ ಮಾಡಕೂಡದೆಂದು ಹಟ ಹಿಡಿದು ನಾಟಕ
ಸಿದ್ಧಿಸುವ ಮಜಲಿಗೂ ಪ್ರಸಂಗವನ್ನು ಒಯ್ದಿದ್ದನಂತೆ ತನ್ನ. ಅಭಿನಯ ಕಲೆ
ಯಿಂದ ನಾಟಕಕ್ಕೆ ಅರ್ಥದ ಅಭಿವ್ಯಕ್ತಿ ಕೊಟ್ಟು, ನಾಟಕಕಾರ ಪ್ರೇಕ್ಷಕರ
ನಡುವೆ ಅನುಕಂಪದ ಸೇತುವೆಯಾಗಿ ನಿಂತಿರುವ ಸುಶಿಕ್ಷಿತ ಕಲಾವಿದರನ್ನು
ಕೂಡ ಇಂಥ ಅಹಂಮನ್ಯ ಗ್ರಂಥಕರ್ತರ ದುರಹಂಕಾರ ಕಡೆಗಣಿಸಿ ಎದ್ದು ನಿಲ್ಲು
ತ್ತದೆ. ನಾಟಕದಲ್ಲಿ ನಾಟಕಕಾರನಿಗಿಂತ ನಟ ಒಂದು ದೃಷ್ಟಿಯಲ್ಲಿ ಮುಖ್ಯ
ಎನ್ನುವ ಮಾತನ್ನು ಮರೆಯುತ್ತದೆ. ತಾನೇ ದೇವರು, ತನ್ನ ಪೂಜೆಯೆ ಮುಖ್ಯ

ಎಂಬ ತಪ್ಪು ಭಾವನೆಗೆ ಎಡೆಕೊಡುತ್ತದೆ. ಇದರಿಂದ ನಾಟಕದ ಒಟ್ಟು ಸಾರ್ಥಕ ನಿವರ್ಹಣಾ ಕೃತಿ ಊನವಾಗಿಯೆ ನಿಲ್ಲುತ್ತದೆ. ಅಂತೇ ನನ್ನ ಸ್ನೇಹಿತನಿಗೆ ಈ ಮಾತು ಅಷ್ಟೊಂದು ಆಪ್ಯಾಯಮಾನವಾಗಿರಬೇಕು.

ಮುಂದೆ ಮಾತುಗಳು ಬಹಳ ಸರಳವಾಗಿ ನಡೆದವು. ನನ್ನ ಸ್ನೇಹಿತ ಕೇಳುವ ಮೊದಲೇ ಅವರೇ ಎಲ್ಲ ಆವನ ಅನುಮಾನಗಳಿಗೂ ಉತ್ತರ ಹೇಳಿ ಬಿಡುತ್ತಿದ್ದರು.

" ನೀವು ಬರೆದ ಭಾಷೆ ಗ್ರಾಂಥಿಕವಿದೆ. ಅದನ್ನು ಬಳಕೆಮಾತಿಗೆ ತಿರಿಗಿಸಿ ಕೊಡುತ್ತೀರಾ ? "

" ಅದರಲ್ಲೇನಿದೆ ? ನೀವೇ ಮಾಡಿಕೊಳ್ಳಬಹುದು. "

" ಹಾಡು ಮೂವತ್ತೈದು ಇವೆ. ಮತ್ತು ನಾಲ್ಕೈದು ಪಾತ್ರಗಳ ಬಾಯಲ್ಲಿವೆ ಅಷ್ಟು ಜನ ಹಾಡುವವರಿಲ್ಲ, ಒಂದು. ಹಾಡಿದರೆ ನಾಟಕ ಬಹಳೊತ್ತಾಗುತ್ತದೆ. ಹೇಗೆ ಮಾಡಬೇಕು ? "

" ಹಾಡು ಕಡಿಮೆಮಾಡಿಕೊಳ್ಳಿರಿ. ಹಾಡಲಿಕ್ಕೆ ಬರುವವರಿಗಷ್ಟೇ ಇಟ್ಟು ಕೊಳ್ಳಿರಿ. ಅದರಲ್ಲಿ ಕೇಳುವದೇನು ? ನಾಟಕ ಆಗುವುದೇ ಇಂಥ ಹೊಂದಿಕೆ ಯಿಂದ."

" ಹೀಗೆ ಮಾಡಿದರೆ ಹೇಗೆ,– ಕೆಲ ಹಾಡುಗಳನ್ನು ರೇಡಿಯೋದಿಂದ ಬಂದಂತೆ ಮಾಡಿದರೆ ? "

" ಒಳ್ಳೆಯದಾಗಬಹುದು, ಸಾಧ್ಯವಾದರೆ. "

" ಕಾಲ ನಿರ್ಬಂಧದಿಂದ, ನಾಟಕದಲ್ಲಿಯ ಅಲ್ಲಲ್ಲಿಯ ಕೆಲಭಾಗ ಕಡಿಮೆ ಮಾಡಬಹುದೇನು ? "

" ಅದು ಅನಿವಾರ್ಯವಿದ್ದಾಗ ಮಾಡಬಹುದು. ಆದರೆ ನಾಟಕದ ಕಥಾವಸ್ತುವಿಗೆ ವಿಸಂಗತವಾಗಿರಬಾರದು. ನೋಡಿದವರಿಗೆ ತ್ಯಾಪಿಯ ಕೌದಿ ಯಂತೆ ಕಂಡಿರಬಾರದು. ಅದನ್ನು ನಿಮಗೇನು ಹೇಳುವದು. ನುರಿತವರೇ ಇದ್ದೀರಿ. "

" ಯಾವುದಕ್ಕೂ ತಮ್ಮ ಅನುಮತಿ ಇರಬೇಕು. ಏನಾದರೂ ಮಾಡ ಹೋಗಿ ಕೃತಿಗೆ ಅನ್ಯಾಯ ಬಗೆದಿರಬಾರದು. ನೀವೇ ಮಾಡಿಕೊಟ್ಟರೆ ಒಳ್ಳೇದು. "

"ರಂಗತಾಲೀಮು ನನ್ನ ಕಣ್ಣೆದುರಿನಲ್ಲಿಯೇ ನಡೆದಿದ್ದರೆ ಅಲ್ಲಿಯೆ ತಿದ್ದಬಹುದಾಗಿತ್ತು. ಈಗ ಅದು ಸಾಧ್ಯವಿಲ್ಲ. ನೀವೇ ಮಾಡಿರಿ." ಎಂದು ಎದ್ದು ಒಳಗೆ ಹೋಗಿ ತಾವೇ ಎರಡೂ ಕೈಯಲ್ಲಿ ಚಹಾದ ಕಪ್ಪು ತೆಗೆದುಕೊಂಡು ಬಂದು ನಮಗೆ ಕೊಟ್ಟರು.

ಚಹಾ ಕುಡಿದು ನಮಸ್ಕಾರಮಾಡಿ ಅಲ್ಲಿಂದ ಹೊರಟು ಬಂದೆವು.

* * * *

೧೧-೧-೧೯೫೨

ತೀರ ನಸುಕಿನಲ್ಲಿಯೆ ನನ್ನ ಸ್ನೇಹಿತ ಮನೆಗೆ ಬಂದು ಮಲಗಿದ ನನ್ನನು ಎಬ್ಬಿಸಿದ. ಅವನು ಬಹಳ ಗಡಬಿಡಿಯಲ್ಲಿದ್ದಂತಿತ್ತು.

" ಏಳು ಮಹಾರಾಯಾ, ಇನ್ನೂ ಮಲಗೀದಲ್ಲ ? ನನ್ನ ಪರೀಕ್ಷಾ ಕಾಲ ಬಂದದ. ನಿನ್ನ ಸ್ನೇಹಿತನ ಮಾರಿಗೆ ಮಸಿ ಹಚ್ಚೋ ಹೊತ್ತು ಬಂದರೂ ನೀ ಇನ್ನೂ ಆರಾಮ ಬಿದ್ದುಕೊಂಡೀಯಲ್ಲ ? ಏಳು ಮಸ್ಯಾಲಕ್ಕ " ಎಂದು ಕೈಹಿಡಿದು ಎಬ್ಬಿಸಿ ಕುಳ್ಳಿರಿಸಿದ. ತಾನೂ ಹತ್ತಿರ ಕುಳಿತ.

" ಯಾಕೋ, ಅಂಥಾದೇನು ಬಂದದ ? ಬಂಗಾರದಂಥಾ ನಾಟಕಕಾರ ಸಿಕ್ಕಾರ ನಿನಗ. ಒಂದು ಚಕಾರ ಶಬ್ದ ಮಾತಾಡೂದಿಲ್ಲ ನಿನಗ ಪ್ರತಿಕೂಲಾಗಿ. ನಾಟಕ ಮುಗಿದಿರಬೇಕಲ್ಲ ? "

" ಹುಂ, ನಮ್ಮ ನಾಟಕಾನs ಮುಗಿಯೋ ಹೊತ್ತು ಬಂದದ ಈಗ. ಬಂಗಾರದಂಥಾ ನಾಟಕಕಾರರ ಮೋರಿಗೇ ಮಸೀ ಹಚ್ಚೋ ಹೊತ್ತು ಬಂದು ಕೂತದ, ಏನು ಮಾಡಬೇಕು ಬಾ ಮಹಾರಾಯಾ ! " ಎಂದು ದೀರ್ಘವಾಗಿ ಉಸರ್ಗರೆದ ನನ್ನ ಸ್ನೇಹಿತ.

" ಯಾಕ, ಅಂಥಾದೇನಾಗೇದ ? "

" ನಾಳೀ ಸಮಾರಂಭ, ಗೊತ್ತದಿಲ್ಲೋ ? "

" ಎಲ್ಲಾ ವರ್ತಮಾನಪತ್ರದಾಗೂ ಬಂದದ ಅಂದಮ್ಯಾಲ ಗೊತ್ತಿರದ ಇರತದೇನು? ಕಾರ್ಯಕ್ರಮ ನೋಡಿದರ 'ಗ್ರ್ಯಾಂಡ್' ಅನಬೇಕಾಗತದ!"

" ಏನು ಗ್ರ್ಯಾಂಡೋ ಏನೋ! ನನಗ ಇದೆಲ್ಲ ವಿಚಿತ್ರನs ಅನಸತದ. ಜಾದೂಗಾರನ ಗೊಂಬಿ ಇದ್ದಾಂಗ ನೋಡು ಈ ದೇಹ. ಕುಣಿಸಿದ್ದಾಂಗ

ಕುಣೀತದ. ಹೋಗಲಿ, ಉಳಿದ ಕಾರ್ಯಕ್ರಮುದ್ದು ನನಗ ಅಷ್ಟೊಂದು ಹತ್ತಿಲ್ಲ. ನನಗ ಹತ್ತಿದ್ದು ನಾಟಕದ್ದs ಕಾಳಜಿ ಬಹಳ. "

" ಎಲ್ಲಾ ಸರಿ ಆಗತದೇಳೋ. ಯಾಕ ಸುಮ್ಮನ ಚಿಂತಿ ಮಾಡತೀದಿ."

" ಹಾಂಗಲ್ಲಪಾ. ಇವತ್ತ ಮಧ್ಯಾಹ್ನಕ ನಮ್ಮ ನಾಟಕದ ಜನ ಬರತದ. ಒಂದು ಮಾತು ತಿಳಿಸ್ಯಾರ ಅವರು : 'ಆದಷ್ಟು ರಂಗತಾಲೀಮು ಗ್ರಂಥ ಕರ್ತರ ಕಣ್ಣಿಗೆ ಬೀಳದಂತೆ ಮಾಡಿರಿ' ಅಂತ. ಇದರ ಅರ್ಥ ಏನು? ರಂಗತಾಲೀಮು ನೋಡಿದರ ಅಭಿಪ್ರಾಯ ಅಷ್ಟೊಂದು ಒಳ್ಳೇದಾಗಲಿಕ್ಕಿಲ್ಲ ಅಂತೋ? ಒಮ್ಮೆಲೆ ನಾಟಕನs ನೋಡ್ಲಿ ಅಂತೋ? ಗ್ರಂಥಕರ್ತರನ್ನ ಕೇಳಿದರ, ಅವರು ಅಂತಾರ,ರಂಗತಾಲೀಮು ತೋರಿಸಲಿಕ್ಕೇಬೇಕು ಅಂತ. ತೋರಿಸಿದರ ಏನಾದೀತು? ತೋರಿಸದಿದ್ದರ ಏನಾದೀತು? ಅಂಬೋ ಇತ್ತಂಡದೊಳಗ ಬಿದ್ದೀನಿ ನಾನು. ಯಾವದೂ ಬಗೀನs ಹರೀವಲ್ದಾಗೇದ. ನಮ್ಮ ಪಾತ್ರ ವರ್ಗೇನೊ ಅಂಥ ಪ್ರಸಂಗ ಬಂದರ ಹಿಂದ ಬೀಳಲಿಕ್ಕಿಲ್ಲ. 'ಗಟ್ಸ್' ಇದ್ದವರು ಇದ್ದಾರ ಖರೆ. ಆದರ ಮಹಾ ಆಲಸೀ ಮಂದಿ. ಅಂಥ ಪ್ರಸಂಗ ಬಂದರೇ ಏಳವರು. ಇಲ್ಲದಿದ್ದರ ಇಲ್ಲೇ ಇಲ್ಲ. "

" ನೀ ಅಂದ್ಹಾಂಗ, ನಾಟಕ ಇನ್ನೂ ಅಷ್ಟು ಪಕ್ಕಾ ತಯಾರಾಗಿರಲಿಕ್ಕಿಲ್ಲೇನು ? ಅದಕ್ಕಂತs ಹಾಂಗ ತಿಳಿಸಿರಬೇಕು. ಗ್ರಂಥಕರ್ತರಿಗೆ ಹೇಳಿದರಾಯಿತು, ರಂಗತಾಲೀಮು ಇಟಗೊಂಡಿಲ್ಲಾ ಅಂತ. "

" ಆದರೂ ಅದು ಯಾಕೋ ನನಗ ಬರೋಬರಿ ಅನಸೂದಿಲ್ಲ. ಹೋಗಿ ಹೇಳಿಯಂತೂ ಬರೋಣ. "

ಇಬ್ಬರೂ ಎದ್ದೆವು. ಗ್ರಂಥಕರ್ತರ ಮನೆಗೆ ಹೋಗಿ ಹೇಳಿಯೂ ಬಂದೆವು. ವಾಸ್ತವಿಕವಾಗಿ ಅಂದು 'ಡ್ರೆಸ್ ರಿಹರ್ಸಲ್' ಇಟ್ಟುಕೊಳ್ಳಬೇಕು. ಗ್ರಂಥಕರ್ತರು ಅದಕ್ಕೆ ಬಂದು ನೋಡಿ, ತಮ್ಮ ಸಲಹೆ ಸೂಚನೆ ಕೊಡಬೇಕು, ಎಂದು ತಿಳಿವಳಿಕೆ ಕೊಟ್ಟಿರಬೇಕು ನನ್ನ ಸ್ನೇಹಿತ ಅವರಿಗೆ. ಅಂತೇ ಗ್ರಂಥಕರ್ತರು ಏನು ತಿಳಿದುಕೊಳ್ಳುತ್ತಾರೋ ಎಂದು ಒಳಗೊಳಗೇ ಭಯಗೊಂಡಿದ್ದ.

ನಾಟಕದ ಜನ ಬಂತು. ನಾನೂ ಈಗ ಅವರಲ್ಲಿಯವನೇ ಒಬ್ಬನಾಗಿ ಬಿಟ್ಟಿದ್ದೆ. ಯಾರ ಮುಖದ ಮೇಲೆ ನೋಡಿದರೂ ದ್ರುವ ಇರಲಿಲ್ಲ. ಒಂದು

ಕಾಲಕ್ಕೆ ರಂಗಶಾರ್ದೂಲರೆಂದುಕೊಂಡವರು, ರಂಗವಿಕ್ರಮರೆಂದುಕೊಂಡವರು, 'ಪ್ರಾಂಟರಂತೆಂಬವರ ಗಂಡ' ಎನಿಸಿಕೊಂಡವರು, ನಾಟ್ಯಧುರಂಧರರು, ನಟ ವಿಭೀಷಣರು, ಅಲಂಕಾರರು, ರತ್ನಾಕಾರಕರು........ಮೊದಲಾದವರೆಲ್ಲ ಈಗ ಹುಲ್ಲೆಯಾಗಿದ್ದರು, ಜಿಟ್ಟೆಯಾಗಿದ್ದರು, ಮೂಷಕರಾಗಿದ್ದರು, ಹೆಸರು ಹೇಳ ಲಿಕ್ಕೆ ಬಾರದವರಾಗಿದ್ದರು. ಅವರಲ್ಲಿಯ ಒಬ್ಬರು ನನ್ನ ಸ್ನೇಹಿತನ ತೀರ ಹತ್ತಿರ ಬಂದು ಕಿವಿಯಲ್ಲಿ ಕೇಳಿದರು: "ರಿಹರ್ಸಲ್ ಆದ ಏನು ? ಮತ್ತ ಅವರು ಬರತಾರೇನು ?" ನನ್ನ ಸ್ನೇಹಿತ ಹೇಳಿದ: "ಅವರು ಬರಲಿ ಬಿಡಲಿ, ಇವತ್ತ ರಾತ್ರಿ ರಿಹರ್ಸಲ್ ಅಂತೂ ಆಗಲಿಕ್ಕೇಬೇಕು. ಅವರು ನೋಡ ದಿದ್ದರೂ ನಾನು ನೋಡಬೇಕು. ನೀವು ಎಲ್ಲರೂ ತಯಾರಾಗಬೇಕು" ನನ್ನ ಸ್ನೇಹಿತನ ಈ ಮಾತುಗಳು ಅವನ ತಲೆಯ ಮೇಲಿನ ಭಾರವನ್ನೆ ತೋರಿ ಸುತ್ತವೆಯೋ ಎನ್ನುವಷ್ಟು ಭಾರವಾಗಿದ್ದವು, ಗಂಭೀರವಾಗಿದ್ದವು.

ಇಷ್ಟಾದ ನಂತರ ಅವರೆಲ್ಲರನ್ನು ಅವರಷ್ಟಕ್ಕೆ ಬಿಟ್ಟು ನಾವಿಬ್ಬರೂ ಬೇರೆ ಕೆಲಸಗಳಿಗೆ ಹೋದೆವು.

* * * *

ರಾತ್ರಿ ಒಂಬತ್ತಾಗಿತ್ತು. ಒಂದು ದೊಡ್ಡ ಹಾಲಿನಲ್ಲಿ ರಂಗತಾಲೀಮಿನ ವ್ಯವಸ್ಥೆಯಾಗಿತ್ತು. ಅಲ್ಲಿ ಅನಾಯಾಸವಾಗಿ ರಂಗಪರಿಸರವೆಲ್ಲ ಸಿದ್ಧವಾಗಿಯೇ ಇತ್ತು. ಪಾತ್ರ ಹಾಕಿದವರೆಲ್ಲ ತೆರೆಯ ಹಿಂದೆ ಸಿದ್ಧತೆಗಾಗಿ ಹೋದರು. ಉಳಿದ ನಾಲ್ಕೆಂಟು ಜನ ಪ್ರೇಕ್ಷಕರಾಗಿ ಕುಳಿತರು. ನನ್ನ ಸ್ನೇಹಿತ ರಂಗವ್ಯವಸ್ಥಾಪಕ ನಾಗಿ ಅತ್ತಿಂದಿತ್ತ ಇತ್ತಿಂದತ್ತ ಓಡಾಡುತ್ತಿದ್ದ.

ಎಲ್ಲಾ ಸಿದ್ಧವಾಯಿತು. ಇನ್ನೇನು ಪರದೆ ಎತ್ತುವವರು, ಅಷ್ಟರಲ್ಲಿ ನಾಲ್ಕಾರು ಜನ ಸಗೃಹಸ್ಥರು ಒಳಗೆ ಬಂದು ಕುಳಿತರು.

ತೆರೆಯೆದ್ದಿತು. ಸೂತ್ರಧಾರ ನಾಂದಿ ಹೇಳಬೇಕು. ಎಷ್ಟೊತ್ತಾದರೂ ಹೇಳಲೇ ಇಲ್ಲ. ನೋಡಿದರೆ, ರಂಗಭೂಮಿಯ ಮೇಲೆ ಪಡದೆಗಳ ಸಂದಿನಲ್ಲಿ ಎಲ್ಲಿ ನೋಡಿದರೂ ಮುಖಗಳೇ ಕಾಣುತ್ತಿದ್ದವು. ಎಲ್ಲರ ಕಣ್ಣೂ ಒಂದ ಮೂಲೆಯಲ್ಲಿ ನೆಟ್ಟಿದ್ದವು. ನಾನೂ ನೋಡಿದೆ. ಒಂದು ಬಿಳಿ ಕಂಬಳಿಯನ್ನು ಪೂರಾ ಹೊದ್ದುಕೊಂಡು ಕೈಯಲ್ಲಿ ಬಡಿಗೆ ಹಿಡಿದುಕೊಂಡು ಗ್ರಂಥಕರ್ತರು

ಒಂದು ಮೂಲೆಯಲ್ಲಿ ಬಂದು ಕುಳಿತಿದ್ದರು. ನನಗೂ 'ಶಾಕ್' ಬಡಿದಂತಾ ಯಿತು. ವಾತಾವರಣವೇ ಅಷ್ಟು ಬದಲಾಗಿಬಿಟ್ಟಿತ್ತು. ನನ್ನಸ್ನೇಹಿತನ ಸ್ಥಿತಿಯ ನ್ನಂತೂ ಹೇಳಲಿಕ್ಕೇಬೇಡ. ಒಬ್ಬರ ಕಿವಿಯಲ್ಲಿ ಒಬ್ಬರ ಬಾಯಿ ಕಂಡವು. ಮೂಲೆಮೂಲೆಗೆ ಹೋಗಿ ಗುಂಪುಗುಂಪಾಗಿ ನಿಂತರು ಜನ.ಎಲ್ಲರೂ ಹೌಹಾರಿ ದಂತಿತ್ತು. ಪರಿಸ್ಥಿತಿಯನ್ನು ಹೇಗೆ ಎದುರಿಸಬೇಕೆನ್ನುವುದೇ ತಿಳಿಯದಾಗಿತ್ತು. ಹಾಡಲು ಕೈಜೋಡಿಸಿ ನಿಂತಿದ್ದ ಸೂತ್ರಧಾರ ಯಾವಾಗಲೋ ಒಳಗೆ ಜಾರಿದ್ದ.

ಮುಖ್ಯಪಾತ್ರ ವಹಿಸಿದ್ದ ಸದಸ್ಯ ನನ್ನ ಸ್ನೇಹಿತನ ಹತ್ತಿರ ಬಂದು "ಏನೂ ಕಾಳಜೀ ಬೇಡ. ನಾನೆಲ್ಲ ಪಾರುಮಾಡುತ್ತೇನೆ." ಎಂದು ಹೇಳಿದವನೆ ತಾನೇ ಹೋಗಿ ಸೂತ್ರಧಾರನಾಗಿ ನಿಂತು ನಾಂದಿ ಪ್ರಾರಂಭಿಸಿದ.

ಏನು ಆ ಹಾಡುಗಾರಿಕೆ ಅದು! ಓ! ಅಪ್ರತಿಮ! ಕೇಳಿದವರೆಲ್ಲ ಮಂತ್ರಮುಗ್ಧರಾಗಿದ್ದರು. ಆ ಮೊದಲ ಹಾಡಿನಿಂದಲೇ ನಾಟಕದ ಯಶಸ್ಸನ್ನು ಅಳೆಯಬಹುದಾಗಿತ್ತು. ಆದರೆ ಗ್ರಂಥಕರ್ತರ ಮುಖ ಮಾತ್ರ ಯಾವ ಅರ್ಥ ವನ್ನೂ ಕೊಡುತ್ತಿರಲಿಲ್ಲ.

ನಾಟಕ ಮುಂದೆ ನಡೆಯಿತು. ಹಾಗೂ ಹೀಗೂ ಮಾಡಿ ಒಂದು ಅಂಕ ಮುಗಿಯಿತು. ಆಗಬಾರದ ತಪ್ಪುಗಳೆಲ್ಲ ಆದರಲ್ಲಿ ಆದುವು. 'ನಾಟಕ ಇನ್ನು ಮುಂದುವರಿಸುವುದು ಬೇಡ. ಇಲ್ಲಿಗೇ ಮುಗಿಸೋಣ' ಎಂದು ನನ್ನ ಸ್ನೇಹಿತ ಸೂಚಿಸಿದ. ಅಲ್ಲಿಗೇ ಅಂದಿನ ರಿಹರ್ಸಲ್ ಮುಗಿಯಿತು.

ಎಲ್ಲರೂ ಬಂದು ಗ್ರಂಥಕರ್ತರ ಹತ್ತಿರ ಕುಳಿತರು. ಏನೇನೋ ಮಾತಾ ಡಿದರು. ದೇಶಾವರಿ ನಗೆ ನಕ್ಕರು. ನಾಟಕದ ವಿಷಯ ಕೇಳಲು ಯಾರಿಗೂ ಧೈರ್ಯವಿರಲಿಲ್ಲ. ಕೊನೆಗೆ ಆ ಶ್ಯಾಮರಾಯರೇ "ಏನಾದರೂ ಸೂಚನೆ ಗಳಿದ್ದರೆ ಹೇಳಬೇಕು." ಎಂದು ಕೇಳಿಯೇಬಿಟ್ಟರು.

"ನಾಳೆ ನಾಟಕ. ಇವತ್ತ ಸೂಚನೆ ಕೇಳಿದರ ಏನು ಹೇಳಬೇಕು? ಮೊದಲಿಗೇ ಆಗಿದ್ದರೆ ಏನಾದರೂ ಹೇಳಬಹುದಾಗಿತ್ತು. ಈಗ ನಾಟಕಾ ಆಡೋದನ್ನ ಬ್ಯಾರೆ ಬಿಡೋಹಾಂಗಿಲ್ಲಲ್ಲ? ಆಗಲಿ ನಡೀಲಿ; ಆದ್ಹಾಂಗ ಆಯಿತು." ಎಂದು ಮುಖ ಸ್ವಲ್ಪ ಮುದುಡಿಕೊಂಡೇ ಹೇಳಿದರು. ಕೂಡಲೇ ಎದ್ದು ಹೋಗಿಯೂಬಿಟ್ಟರು.

## XVIII

ನನ್ನ ಸ್ನೇಹಿತ ಚಹಾ ತರಿಸಿದ ಎಲ್ಲರಿಗೂ. ಕುಡಿದಾದ ಮೇಲೆ ಸುತ್ತಲೂ ಕೂಡಿಸಿಕೊಂಡ ನಟರನ್ನೆಲ್ಲ. ಪರಿಸ್ಥಿತಿ ವಿವರಿಸಿದ. "ಒಳ್ಳೆಯವರ ಮಾನ ಹಳ್ಳ್ಯಾಗ ಹೋತು ಅಂಬೋ ಹಾಂಗ ಆಗತದ. ಇನ್ನ ಏನs ಮಾಡಿದರೂ ಅವರ "First Impression" ಆದದ್ದು ಹೋಗೋದಿಲ್ಲ. ಆದರೂ ಅಪಹಾಸ್ಯಕ್ಕೆ ಈಡಾಗದಂತೆ ಪಾರುಮಾಡಿರಿ." ಎಂದು ಅವರೆದುರಿಗೆ ದೈನ್ಯಾಸದಿಂದ ಗೋಗರೆದ.

"ನಾಳೆ ನಾಟಕ ಕೆಟ್ಟರ ಅಲ್ಲಿಂದ ನಮಗ ಹೇಳು. ಈಗ ನಮ್ಮನ್ನಿಷ್ಟು ಇಲ್ಲೇ ಬಿಟ್ಟು ನೀವೆಲ್ಲರೂ ಹೋಗರಿ. ನಾಳೆ ರಾತ್ರಿ ನಾವು ಥಿಯೇಟರಿಂಗೇ ಬರೋವರು." ಎಂದು ಭೀಮಧ್ವನಿಯ ಸದಸ್ಯನೊಬ್ಬ ಹೇಳಿದ. ನಾಳೆ ಏನಾಗುವದೋ ಏನೋ ಎಂಬ ಚಿಂತೆ ಮನಸ್ಸನ್ನು ಸುಡುತಿರಲು ನನ್ನ ಸ್ನೇಹಿತ ನನ್ನೊಡನೆಯೆ ಅಲ್ಲಿಂದ ಹೊರಟುಬಂದ.

* * * *

೧೨-೧-೧೯೫೨

ನನಗೂ ನನ್ನ ಸ್ನೇಹಿತನಿಗೂ ಇಂದು ಮಾರಿಗೆ ಮಾರಿ ಬೆಟ್ಟಿಯೇ ಆಗಲಿಲ್ಲ. ಇನ್ನು ಮಾತನಾಡುವದಂತೂ ದೂರ ಉಳಿಯಿತು.

ಮುಂಜಾನೆಯಿಂದ ಮಧ್ಯರಾತ್ರಿಯವರೆಗೂ ಕಾರ್ಯಕ್ರಮಗಳು. ಇಡಿ ಊರಲ್ಲಿಯೇ ಹೊಸ ಚೈತನ್ಯ ಹರಿದಾಡಿದಂತೆ ಕಾಣುತ್ತಿದೆ. ಯಾರ ಬಾಯಲ್ಲಿಯೂ ಉತ್ಸವದ ಮಾತುಗಳೇ.

"ಒಬ್ಬ ಹುಡುಗನಂಥವ ಮಾತಾಡಿದ್ನಲ್ಲ – ಏನ್ ಉತ್ತಮ ಮಾತಾಡಿದ ಅಂವ! ಮೂರ್ತಿ ಸಣ್ಣದಿದ್ದರೂ ಕೀರ್ತಿ ದೊಡ್ಡದದ ಅಂ!" ಎಂದು ಯಾರೋ ಒಬ್ಬರು ಅಂದದ್ದು ನನ್ನ ಕಿವಿಗೆ ಬಿತ್ತು.

ಸಾಯಂಕಾಲದ ಸಮಾರಂಭ ಯಥಾಸಾಂಗವಾಗಿ ನೆರವೇರಿತು. ಮನಸ್ಸಿನ ಮೇಲೆ ಅಚ್ಚೊತ್ತಿದಂತೆ ಅಲ್ಲಿ ನಡೆದದ್ದೆಲ್ಲ ಮೂಡಿ ನಿಂತಿತು.

ರಾತ್ರಿ ಬಂತು. ನಾಟಕದ ಹೊತ್ತಾಯಿತು. ಹಿಂದಿನ ರಾತ್ರಿಯ ನೆನಪು ದಿಗ್ಗನೆ ತಲೆಯಲ್ಲಿ ಚಿಮ್ಮಿ ಬಂತು. ಸ್ವಲ್ಪ Nervious ಆದೆ. ನನ್ನ ಸ್ನೇಹಿತನ ಮನಸ್ಸಿನ ಪರಿಸ್ಥಿತಿಯನ್ನು ನೆನೆಯಲು ಪ್ರಯತ್ನಪಟ್ಟೆ. ಏನುಪಯೋಗ? ಏನಿದೆಯೋ ಅದನ್ನು ತಪ್ಪಿಸಲಿಕ್ಕಂತೂ ಬರುವಂತಿಲ್ಲ. ಯಾಕೆ ಒದ್ದಾಡಬೇಕು ಎಂದು ಧೈರ್ಯ ತಂದುಕೊಂಡೆ. ನಾಟಕಗೃಹಕ್ಕೆ ಹೋದೆ. ಆ ಜನರ ಗದ್ದಲ ನೋಡಿಯೇ ಅರ್ಧ ಗಾಬರಿಯಾದೆ. ನನ್ನ ಸ್ನೇಹಿತನ ಸಹಾಯದಿಂದ 'ಗ್ರೀನ್ ರೂಮಿ'ನಲ್ಲಿಯೇ ಹೋದೆ. ಪಾತ್ರಸಿದ್ಧತೆ ನಡೆದಿತ್ತು. ಎಲ್ಲರನ್ನೂ ಮಾತಾಡಿಸಿ, ಹುರುಪಿನ ಮಾತು ಹೇಳಿ, ಹೊರಗೆ ಬಂದು ಪ್ರೇಕ್ಷಕರಲ್ಲಿ ಕುಳಿತುಕೊಂಡೆ. ಕರ್ಮಧರ್ಮಸಂಯೋಗದಿಂದ ಗ್ರಂಥಕರ್ತರ ಹತ್ತಿರವೇ ನನ್ನ ಜಾಗ ಬಂದಿತ್ತು.

ಹೊರಗಿನ ಗದ್ದಲ ಅತಿಯಾಯಿತು. ಸಿಳ್ಳು, ಕ್ಯಾಕಿ, ಸುರುವಾದವು. ಒಂದೆರಡು ಕಲ್ಲೂ ಬಿದ್ದವು.

ಇದೇ ಹೊತ್ತಿಗೆ ಅಂಕ-ಪರದೆ ತೆರೆಯಿತು. ನಡೆದ ಗದ್ದಲವೆಲ್ಲ ತನ್ನದು ತಾನೇ ಕಡಿಮೆಯಾಗಿ ಶಾಂತ ವಾತಾವರಣ ನೆಲಸಿತು.

ಸೂತ್ರಧಾರ ನಟಿ ಬಂದು ನಾಂದಿ ಹಾಡಿ ಹೋದರು.

ಮೊದಲ ದೃಶ್ಯ ಪ್ರಾರಂಭವಾಯಿತು. ತಂದೆ-ಮಕ್ಕಳ ಮಾತು ಜನರ ಮನಸ್ಸನ್ನು ಹೊಗಹತ್ತಿದವು. ಕಥೆಯ ಎಳೆ ಸಿಕ್ಕು ಪ್ರೇಕ್ಷಕರು ಅದರ ಗುಂಟ ನಡೆಯಹತ್ತಿದರು. ತಂದೆಯ ನೈಜವಾದ ಅಭಿನಯ ಪ್ರೇಕ್ಷಕರ ನಟರ ನಡುವಿನ ಅಂತರವನ್ನೇ ಕಡಿಮೆ ಮಾಡಿತ್ತು. ನಾಟಕದಲ್ಲಿ ಅವರು ಹೊಕ್ಕಿದ್ದರು; ನಾಟಕ ಅವರಲ್ಲಿ ಹೊಕ್ಕಿತ್ತು. ಅಲ್ಲಿಯ ಎಲ್ಲರೂ ಏಕದೇಹವಾಗಿದ್ದರು. ರಕ್ತಾಭಿಸರಣದಂತೆ ಎಲ್ಲರ ಜೀವನಾಡಿಗಳಲ್ಲಿಯೂ ಅನುಕಂಪರಸವು ಹರಿದಾಡುತ್ತಿತ್ತು. ಸಕೃತ್ ದರ್ಶನಕ್ಕೇ ನಾಟಕ ಪ್ರೇಕ್ಷಕರನ್ನು ತನ್ನ ಕಡೆಗೆ ಎಳೆದುಕೊಂಡುಬಿಟ್ಟಿತ್ತು.

ನಿನ್ನೆ ರಾತ್ರಿ ರಿಹರ್ಸಲ್ಲಿನಲ್ಲಿ ಪಾತ್ರಮಾಡಿದವರು ಇವರೇನೇ ಎನ್ನುವಷ್ಟು ನನ್ನ ಮನಸ್ಸು ಅಚ್ಚರಿಗೊಂಡಿತ್ತು. ಒಳಗೊಳಗೇ ಸಮಾಧಾನದ ಉಸಿರೊಂದನ್ನು ಬಿಟ್ಟೆ. ಹಾಗೇ ಗ್ರಂಥಕರ್ತರ ಮುಖದ ಕಡೆಗೆ ಕದ್ದು ನೋಡಿದೆ. ಪ್ರಾರಂಭದಲ್ಲಿ ಗಂಟಿಕ್ಕಿದ ಮುಖ ಸ್ವಲ್ಪ ಅರಳುವದರಲ್ಲಿತ್ತು.

ಮಡಿಯಲ್ಲಿದ್ದ ತಂದೆ ಅಸ್ಪೃಶ್ಯನ ಧ್ವನಿಯಿಂದ ಮೈಲಿಗೆಯಾಗಿ, ಅವನ ದರ್ಶನದಿಂದ ಕೋಪಗೊಂಡು ಕೈಯಲ್ಲಿಯ ಥಾಲಿಯನ್ನು ಅವನತ್ತ ಒಗೆದರೆ ಅದರ ಸಪ್ಪಳಕ್ಕೇ ಪ್ರೇಕ್ಷಕರು ಕುಳಿತಲ್ಲಿಯೇ ಬೆಚ್ಚಿಬಿದ್ದರು. ಗ್ರಂಥಕರ್ತರ ಮುಖ ಇನ್ನಷ್ಟಗಲವಾಯಿತು.

ಈ ದೃಶ್ಯ ಹೋಗಿ ಇನ್ನೊಂದು ಬಂತು. ಥಾಲಿಯ ಪೆಟ್ಟು ತಿಂದು ನರಳುತ್ತಿದ್ದ ಅಸ್ಪೃಶ್ಯನನ್ನು ಮಗನೇ ಕರಕೊಂಡು ಉಪಚರಿಸುತ್ತಿದ್ದ. ಶಿವಪೂಜೆಗೆ ಹೊರಟಿದ್ದ ಶೆಟ್ಟರನ್ನು ನೋಡಿ – ಇಂವ ಪಾರ್ಟು ಹಾಕಿದವ ಅಲ್ಲ, ಯಾವನೋ ಒಬ್ಬ ಖರೇ ಶೆಟ್ಟಿಯೇ ಬಂದಾನ – ಅಂತ ಅನಿಸಿತು. ನಾಟಕ ಹಾಗೆ ರಸದುಂಬಲಿಕ್ಕೆ ಹತ್ತಿತ್ತು. ಶೆಟ್ಟರ ಕಡ್ಡಿ ಮುರಿದಂಥ ಮಾತು ಹಸಿಗೋಡೆಯಲ್ಲಿ ಹರಳು ನೆಟ್ಟಂತೆ ಪ್ರೇಕ್ಷಕರ ಮನಸ್ಸಿನಲ್ಲಿ ಹೋಗಿ ನಡುತ್ತಿದ್ದವು. ಅಂಜನೆಯ ನಿಸ್ಸಂಕೋಚ ಶುದ್ಧ ನಡಾವಳಿ ಸರ್ವೋತ್ತಮನ ಮುಗ್ಧ ಮನಸ್ಸನ್ನು ಆಕರ್ಷಿಸಿದ್ದು, ಸರ್ವೋತ್ತಮ ಪ್ರಥಮದರ್ಶನದಲ್ಲಿಯೇ ಪ್ರೇಮಪರವಶನಾಗಿದ್ದು, ಎಲ್ಲೆ ಮೀರದಂತೆ ಸೂಕ್ತವಾಗಿತ್ತು; ಹಿತಮಿತವಾಗಿತ್ತು. ಈ ದೃಶ್ಯದ ಕೊನೆಗೆ ಹಾಡಿದ ಹಾಡಂತೂ ಪ್ರೇಕ್ಷಕರನ್ನು ಮೈಮರೆಯಿಸಿಬಿಟ್ಟಿತ್ತು.

ಹೀಗೆ ದೃಶ್ಯದಿಂದ ದೃಶ್ಯಕ್ಕೆ, ಅಂಕಿನಿಂದ ಅಂಕಿಗೆ ನಾಟಕ ರಂಗಿಗೇರುತ್ತ ಕೊನೆಯ ದೃಶ್ಯದಲ್ಲಿ ಉತ್ಕಟ ಭಾವನೆಗಳ ರಸಪಾಕವಾಗಿಬಿಟ್ಟಿತು. ಮಲ್ಲಿನಾಥರ ಗಂಭೀರ ಮೌನವು ಕೂಡ ಹೃದಯವಿದಾರಣವಾದ ಸಂವೇದನೆಯನ್ನುಂಟುಮಾಡುತ್ತಿತ್ತು ಪ್ರೇಕ್ಷಕರ ಹೃದಯದಲ್ಲಿ. ಪ್ರೇಕ್ಷಕರ ಸುಪ್ತಭಾವನೆಗಳ ಮೇಲೆ ನಟರು ನುಡಿಸುವ ಶಬ್ದಸ್ಪರ್ಶಮಾತ್ರದಿಂದ ಅನುಕಂಪಸ್ವರಮಂಡಲವನ್ನೆ ಅದರಲ್ಲಿ ಹುಟ್ಟಿಸುವಂತಿತ್ತು.

ಧವಳಾಬಾಯಿಯ ಅಂತಃಕರಣದ ಆ ಮಾತುಗಳು, ಎಂತಹರನ್ನೂ ಕರಗಿಸದೆ ಬಿಡಲಿಲ್ಲ. ಗ್ರಂಥಕರ್ತರ ಕೈಯೇ ಕಣ್ಣು ಮುಟ್ಟಿದ್ದನ್ನು ನೋಡಿದೆ. ಅಡ್ಡಿ ಇಲ್ಲ, ನಾಟಕ ಆಡಿದ್ದಕ್ಕೆ ಸಾರ್ಥಕವಾಯಿತು ಎಂದುಕೊಂಡೆ. ನಟರನ್ನೆಲ್ಲ, ಮರ್ಯಾದೆ ಕಾಯ್ದುದ್ದಕ್ಕೆ ಮನಸ್ಸಿನಲ್ಲಿಯೇ ಕೊಂಡಾಡಿದೆ. ನನ್ನ ಸ್ನೇಹಿತನ ಧೈರ್ಯಕ್ಕೆ ಮೆಚ್ಚಿದೆ. ಇದು ಭಾಷ್ಯಕಾರರಂತರ ಟೋಳಿ ಅಲ್ಲ; ಇವರಲ್ಲಿ ಜೀವಕಳೆ ಇದೆ ಎಂದುಕೊಂಡೆ.

ಶೆಟ್ಟಿಯ "ವ್ಯಾಪಾರ ಸರಳ ಇರಬೇಕು", ಏಬ್ರಾಂನ "ಆ ಪರಲೋಕದ ತಂದೆಯಾದ ಯೇಸುವು", ಬಿದ್ದಾಡಿಯ "ಆಲ್ ರಾಯಿಟ್ಸ ಸರ್" ಚೆನ್ನಿಯ 'ಬಿ ಎ ಡಿ' ಬ್ಯಾಡ ಅಂದರ ಕೆಟ್ಟ. "ಸಿ ಎ ಟಿ" ಕೆಟ್ ಅಂದರ ಬೆಕ್ಕು, ಚಿನ್ನಮುದ್ದಣ್ಣಾಚಾರ್ಯರ "ಏ - ಏ - ಏನಡ್ಡಿ ಇಲ್ಲ" ಈ ಮಾತುಗಳು ನೋಡಲು ಬಂದವರೆಲ್ಲರ ಬಾಯನ್ನು ಹೊಕ್ಕು ನಿಂತವು.

ನಾಟಕದ ಕೊನೆಯ ದೃಶ್ಯ ರಂಗದ ಮೇಲೆ ನಡೆದಾಗ ಒಳಗೆ ಒಂದು ದೃಶ್ಯ ನಡೆಯಿತು. ಯಾರೋ ಬಂದು ನನ್ನ ಕಿವಿಯಲ್ಲಿ "ಸ್ವಲ್ಪ ಒಳಗೆ ಬರ್ರಿ" ಎಂದು ಕರೆದರು. ಏಳಲಾರದೆ ಎದ್ದು ಒಳಗೆ ಹೋದೆ ಹೋಗಿ ನೋಡಲಾಗಿ ನನ್ನ ಸ್ನೇಹಿತ ಎಚ್ಚರದಪ್ಪಿ ಬಿದ್ದಿದ್ದ. ಕೂಡಲೇ ಹೊರಗೆ ಬಂದು ಡಾಕ್ಟರನ್ನು ಕರೆದೊಯ್ದೆ. ಉಪಚಾರ ನಡೆಯಿತು. ಬಹಳ ಶ್ರಮದಿಂದ ಹಾಗಾಗಿದೆ ಎಂದರು. ಎಷ್ಟೋ ಹೊತ್ತಿನ ನಂತರ ಎಚ್ಚರ ಬಂತು. ಅಷ್ಟೊತ್ತಿಗೆ ನಾಟಕ ಮುಗಿದಿತ್ತು.

ಗ್ರಂಥಕರ್ತರು ಈ ವರೆಗೂ ಒಳಗೆ ಬಂದಿರಲಿಲ್ಲ. ಈಗ ಬಂದರು. ಎಲ್ಲರನ್ನೂ ಬಾಯಿತುಂಬ ಹೊಗಳಿದರು. "ಇಷ್ಟು ಛಲೋ ಆದೀತು ಅಂತ ನನ್ನ ಕಲ್ಪನಾ ಇರಲಿಲ್ಲ. ನಿನ್ನೀದು ನೋಡಿದ ಮ್ಯಾಲಂತೂ ನಾನು ಆಶಾನs ಬಿಟ್ಟಿದ್ದೆ."

"ನಾನು ರಂಗಭೂಮಿಯ ಮ್ಯಾಲ ಬಂದಾಗ ಎರಡು ಮೂರು ಸಾರೆ ನಮ್ಮ ಎಪ್ಪೆ, ಮತ್ತು ನಾರ್ಣ್ಣಾಚಾರು ಹುಬೇಹೂಬ ಬಂದು ಪ್ರೇಕ್ಷಕರೊಳಗ ನಕ್ಕೋತ ಕೂತಾಂಗ ಕಾಣಸತಿತ್ತು." ಎಂದು ಚಿನ್ನಮುದ್ದಣ್ಣಾಚಾರ್ಯರ ಪಾತ್ರ ವಹಿಸಿದ ಶ್ಯಾಮುಕಾಯರು ನಿಂತ ಜನರನ್ನು ಸರಿಸಿ ಮುಂದೆ ಬಂದು ತಮ್ಮವೆರಡು ಅಕ್ಕೀಕಾಳು ಹಾಕಿದರು.

ಗ್ರಂಥಕರ್ತರ ಜೊತೆಗೆ ಬಂದಿದ್ದ ಒಬ್ಬ ಮಹನೀಯರು ಆಗ ಹೇಳಿದರು:

"ಹೌದು ಅವರು ಬಂದಿದ್ದರೂ ಬಂದಿರೋ ಸಂಭವ ಅದ. ಅಥವಾ ಅವರ ಆ ವಾಸನಾಶರೀರ ಇಲ್ಲಿ ಬಂದಿದ್ದರೂ ಬಂದಿರಲಿಕ್ಕೆಬೇಕು. ಯಾಕಂದ್ರ.... ಇಲ್ಲಿ ಕೇಳ್ರಿ, ಇದs ನಾಟಕದ ಮೊದಲನೇ ಅಂಕಿನ ರಂಗತಾಲೀಮು ಹಚ್ಚಿದವರೇ ಅವರು. ಅವರನ್ನ ಕಣ್ಣೆದಿರಿಗೆ ಇಟ್ಟುಕೊಂಡೇ ಈ ನಾಟಕ ಹುಟ್ಟಿತು. ಮತ್ತ

ಅವರು ಹೊರಟುಹೋದರೂ ಅಂತ ನಾಟಕಾನೂ ಅಲ್ಲಿಗೇ ನಿಂತ್ರ್ಯ. ಡೈಬಿಟಿಸ್ ಆಗಿ ಕಾಲು ಕೊಳೀಲಿಕ್ಕೆ ಹತ್ತಿದರ 'ಅದನ್ನ ಕಟ್ ಮಾಡಬ್ಯಾಡ್ರಿ. ನನಗಿನ್ನೂನಾಟಕದಾಗ ಪಾರ್ಟ ಹಾಕಬೇಕಾಗೇದ'ಅಂದು ಕಡಿತನಕ ಹಂಗs ಇದ್ದು, ಅದs ಕಾರಣದಿಂದನs ಜೀವ ಬಿಟ್ಟ ಬಹದ್ದರ್ ಅಂವ! ಸಾಯೋ ಮುಂದ ಏನು ಹೇಳಿದ ಕೇಳ್ರಿ ತನ್ನ ಕ್ಲಬ್ಬಿನ ಮಂದಿಗೆ? "ನನ್ನ ಹೆಣದ ಮ್ಯಾಲ ಕಟಿಗಿ ಇಡಬೇಕಾದವರು 'ಈ ನಾಟಕಾ ಮಾಡೇತೀರತೀವಿ' ಅಂತ ಪ್ರತಿಜ್ಞಾ ಮಾಡೇ ಇಡಬೇಕು. ಅಂದರs ನನ್ನ ಎದಿ ಬೇಯುತದ." ಜೀವಾನೂ ಹೋತ್ಯ. ಹೆಣಾನು ಸುಡಗಾಡಕ್ಕ ಹೋತು. ಕೆಲವರು ಪ್ರತಿಜ್ಞಾನೂ ಮಾಡಿ ಕಟ್ಟಿಗಿ ಇಟ್ಟರು. ಅದಷ್ಟs ಖರೇ ಆತು. ನಾಟಕಾ ಮಾಡೋದೇನು ಇವರಿಂದ ಆಗಲಿಲ್ಲ. ಅದಕ್ಕ ಅವರs ಈ ಮಹಾರಾಯನ ಮೈಯಾಗ ಹೊಕ್ಕ ತಮ್ಮ ಆಶಾಪೂರ್ತಿ ಮಾಡಿಕೊಂಡರು. ಇವತ್ತ ಅವರಿಗೆ ತಮ್ಮ ನಾಟಕಾ ಆಯಿ ತಲ್ಲಾ ಅಂತ ತೃಪ್ತಿ ಆಗಿರಬೇಕು. ಅವರು ನಕ್ಕೋತ ಬಂದು ಇಲ್ಲಿ ಕೂತ್ಹಾಂಗ ಕಂಡಿರೋದರ ಕಾರಣ ಇದು. ಯಾರಿಗೆ ಕಂಡಾರಲ್ಲ, ಆ ಹೊತ್ತು ಕಟಿಗಿ ಇಟ್ಟವರಲ್ಲಿ ಅವರೂ ಒಬ್ಬರು ಇದ್ದರು. ಪ್ರತಿಜ್ಞಾನೂ ಮಾಡಿದ್ದರು. ಕರ್ಮ ಧರ್ಮಸಂಯೋಗದಿಂದ ಅವರೂ ಇವತ್ತಿನ ನಾಟಕದಾಗ ಪಾತ್ರ ಹಾಕೋ ಯೋಗಾಯೋಗ ಒದಗಿ ಬಂದದ. ಆ ಕಾರಣಕ್ಕs ಅವರ ಕಣ್ಣಿಗೆ ಅವರು ಕಂಡಾರ."

ಕೇಳಿದವರೆಲ್ಲರ ಮೈಜುಮ್ಮೆಂದಿತು. ಇದ್ದರೂ ಇರಬೇಕು ಎನ್ನುವ ವಿಶ್ವಾಸ ಹುಟ್ಟಿತು ಎಲ್ಲರಲ್ಲಿಯೂ. ನಾಟಕದ ಯಶಸ್ಸಿಗೆ ಈ ಒಂದು ಹಿನ್ನೆಲೆಯೂ ಕಾರಣವಾಗಿರಬೇಕೆಂದು ನನಗೆನಿಸಿತು. ನನ್ನ ಸ್ನೇಹಿತನ ಮೈಯಲ್ಲಿ ಸೇರಿ ಕೊಂಡಿದ್ದ ಆ ಜೀವಚೈತನ್ಯ ಬಿಟ್ಟುಹೋಗಿರಬೇಕು ಈಗ. ಅಂತೇ ಶಕ್ತಿಹೀನ ನಾಗಿ ಹೀಗೆ ಎಚ್ಚರದಪ್ಪಿಬಿದ್ದಿರಬೇಕು ನನ್ನ ಸ್ನೇಹಿತ, ಎಂದು ನನ್ನ ಬುದ್ಧಿ ಕಾರಣಮೀಮಾಂಸೆಯನ್ನು ಹುಡುಕಿ ತೆಗೆಯಿತು.

ಏನೇ ಇರಲಿ, ಅರ್ಧವಾಗಿದ್ದ ನಾಟಕ ಪೂರ್ಣವಾಯಿತು. ಪೂರ್ಣ ವಾದ ನಾಟಕ ರಂಗದ ಮೇಲೆ ಬಂತು. ರಂಗದ ಮೇಲೆ ಬಂದ ನಾಟಕ ನೋಡಿದವರಿಗೆ ತೃಪ್ತಿ ಕೊಟ್ಟಿತು. ನಾಟಕ-ಕೃತಿ-ಲತೆಗೆ ಕೊನೆಗೊಮ್ಮೆ ಯಶ ಸ್ಸಿನ ಹೂಬಿಟ್ಟಂತಾಯಿತು.

---

# ಕೃತಜ್ಞತೆ

ಈ ನಾಟಕವು 'ಪತಿತೋದ್ಧಾರ' ಎಂಬ ಮೂಲ ನಾಟಕದ ರಂಗ ಆವೃತ್ತಿಯು. ಮೂಲ ನಾಟಕವನ್ನು ಬರೆದ ಶ್ರೀ. ಹುಯಿಲುಗೋಳ ನಾರಾಯಣರಾಯರಿಗೆ ಕಲೋಪಾಸಕ ಮಂಡಲದವರು ಏರ್ಪಡಿಸಿದ ಸನ್ಮಾನ ಸಮಾರಂಭದ ಹೊತ್ತಿಗೆ ಈ ನಾಟಕದ ರಂಗ ಆವೃತ್ತಿಯನ್ನು ಗ್ರಂಥಕರ್ತರ ಅನುಮತಿ ಪಡೆದು ಅಭಿನಯಿಸಲಾಯಿತು. ಅದೇ ರಂಗ ಆವೃತ್ತಿಯನ್ನು ಈಗ ಗ್ರಂಥಮಾಲೆಯಲ್ಲಿ ಪ್ರಕಟಿಸಲಾಗಿದೆ. ಈ ರಂಗ ಆವೃತ್ತಿಗಾಗಿ ಅನುಮತಿಯನ್ನು ಕೊಟ್ಟಿದ್ದಕ್ಕೂ ಅದನ್ನು ಗ್ರಂಥಮಾಲೆಯಲ್ಲಿ ಪ್ರಕಟಿಸಲು ದಯವಿಟ್ಟು ಒಪ್ಪಿದ್ದಕ್ಕೂ ಶ್ರೀ. ಹುಯಿಲುಗೋಳ ನಾರಾಯಣರಾಯರಿಗೆ ಅತ್ಯಂತ ಕೃತಜ್ಞನಾಗಿದ್ದೇನೆ.

ದಿನಚರಿಯಿಂದ ಸಾದರ್ಭಿಕ ಕೆಲ ಭಾಗವನ್ನು ಎತ್ತಿಕೊಂಡು ಇದರಲ್ಲಿ ಪ್ರಕಟಿಸಲು ಒಪ್ಪಿಗೆ ಕೊಟ್ಟು ಈ ನಾಟಕದ ಹಿಂದೆ ನಡೆದ ನಾಟಕಕ್ಕೆ ಕನ್ನಡಿ ಹಿಡಿದು, ಅದರ ಮೇಲೆ ಬೇರೊಂದು ಹೊಸ ಬೆಳಕನ್ನು ಕೆಡಹುವ ಅನುಕೂಲತೆಯನ್ನು ಒದಗಿಸಿಕೊಟ್ಟಿದ್ದಕ್ಕಾಗಿ ನನ್ನ ಸ್ನೇಹಿತನಿಗೂ ನಾನು ಕೃತಜ್ಞನಾಗಿದ್ದೇನೆ.

ಈ ಗ್ರಂಥಕ್ಕೆ ರಕ್ಷಾಪತ್ರವನ್ನು ಸುಂದರವಾಗಿ ತಯಾರಿಸಿಕೊಟ್ಟ ಶ್ರೀ.ವ್ಹಿ.ವಾಯ್. ಜತಾರ ಅವರಿಗೂ ನಾಟಕದಲ್ಲಿಯ ಪಾತ್ರವರ್ಗದ ಛಾಯಾಚಿತ್ರಗಳನ್ನು ಒದಗಿಸಿಕೊಟ್ಟ ಗೆಳೆಯ ಕಲಾವಿದ ವಾಮನ ಶಿರಹಟ್ಟಿಯವರಿಗೂ ನನ್ನ ಕೃತಜ್ಞತೆಯ ವಂದನೆಗಳು.

— ಸಂಪಾದಕ

# ಪಾತ್ರಪರಿಚಯ



೧ ಕನಕರಾಯರು ... ... .... ನಿವೃತ್ತ ಪಬ್ಲಿಕ್ ಪ್ರಾಸಿಕ್ಯೂಟರ್. ಬಿದ್ದೂರಿನ ದೇಶಪಾಂಡೆ ಮನೆತನದವರು. ಬ್ರಿಟಿಶ್ ನೌಕರಶಾಹಿಯ ಪ್ರತೀಕ.

೨ ಸರ್ವೋತ್ತಮ .... ... .... ರಾಯರ ಮಗ. ನವವಿಚಾರದ ಧ್ಯೇಯವಾದಿ ತರುಣ. ತಂದೆಯ ದೃಷ್ಟಿಯಲ್ಲಿ ಉದ್ಧಟ, ಉಡಾಳ. ನಾಟಕದ ನಾಯಕ

೩ ಧವಳಾಬಾಯಿ .... .... .... ರಾಯರ ಹೆಂಡತಿ. ಮೂಢಭಕ್ತಿಯ ಅಂತಃಕರಣದ ಹೆಣ್ಣುಮಗಳು.

೪ ಚಿನ್ನಮುದ್ದಣ್ಣಾಚಾರ್ಯರು.... ರಾಯರ ಪುರೋಹಿತರು. ಬಿದ್ದ ಎತ್ತು.

೫ ಬಿಚ್ಚುನಾಥರಾವ್ .... .... .... ತಿರಗಲಿ ಬಿ. ಸಿ. ಐ ಕಾಲೇಜಿನ ಪ್ರಿನ್ಸಿಪಾಲ್. ಆಷಾಢಭೂತಿ.

೬ ಬಿದ್ದಾಡಿ .... .... ... ಬಿಚ್ಚುನಾಥನ 'ಸರ್ವಂಟ್.' ಚೆನ್ನಿಯ ಸೋದರಮಾವ. ಹಲಸಿನ ಹಣ್ಣು.

೭ ಚೆನ್ನಿ .... .... .... ಬಿದ್ದಾಡಿಯ ಅಕ್ಕನ ಮಗಳು. ಮನೆ ಹೂಡಿ ಮನೆ ಕಟ್ಟುವ ಹೆಣ್ಣು.

೮ ಮಾಚಣ್ಣಶೆಟ್ಟಿ .... .... .... ಬಿಚ್ಚುನಾಥನ ಹಸ್ತಕ. ಹಾಗೂ ಸೈ, ಹೀಗೂ ಸೈ, ವ್ಯಾಪಾರಸ್ಥ.

೯ ಅಂಜನಾ ... .... .... ಅನಾಥಬಾಲಿಕಾಶ್ರಮದಲ್ಲಿ ಬೆಳೆದ ಹುಡಿಗಿ. ಸ್ವತಂತ್ರವಿಚಾರದವಳು. ನಾಟಕದ ನಾಯಕಿ.

೧೦ ಮಲ್ಲಿನಾಥರಾಯರು .... .... ಅಂಜನೆಯ ಪಾಲಕ. ನಾಟಕದ ಸೂತ್ರಧಾರ.

೧೧ ಶಾಂತಣ್ಣ .. .... .... ಹೊಲೆಯರವ. ಮುಖ್ಯಪಾತ್ರಗಳಿಗೆ ಕಲ್ಯಾಣಶಕ್ತಿಯಾಗಿದ್ದಾನೆ.

೧೨ ಏಬ್ರಾಂ .... .... .... ಕ್ರಿಶ್ಚಿಯನ್ ಪಾದ್ರಿ. ಡಾಕ್ಟರ್. ಬೆಳಕು ಕಾಣದೆ ಬೆಳಕು ತೋರಿಸ ಹೊರಟವ.

# ಅರ್ಪಣೆ

ನಾನು ನಾಟಕಗಳನ್ನು ಬರೆವಂತೆ ನನ್ನನ್ನು ಹುರಿದುಂಬಿಸಿ,

ನಾನು ಬರೆಬರೆದಂತೆ

ನನ್ನ ಎಲ್ಲ ನಾಟಕಗಳನ್ನೂ ರಂಗಭೂಮಿಯ ಮೇಲೆ ಯಶಸ್ವಿಯಾಗಿ ತಂದ

**ಗದುಗಿನ "ಯಂಗ್ಮೆನ್ಸ್ ಫುಟ್‌ಬಾ:ಲ್ ಕ್ಲಬ್ಬಿ"ನ**

ಸದಸ್ಯರಿಗೂ ಮತ್ತು ಆ ಸಂಸ್ಥೆಯ ಸಮರ್ಥ ಯೋಜಕರಾಗಿದ್ದ

ದಿವಂಗತರಾದ

**ಶ್ರೀ. ಎಸ್. ಕೆ. ಹುಯಿಲುಗೋಳ**

**ಶ್ರೀ. ಗುಡಿ ನಾರಾಯಣಾಚಾರ್ಯ**

ಇವರಿಗೂ

ಈ ನಾಟಕವನ್ನು ಅರ್ಪಿಸಿದ್ದೇನೆ.

— ಗ್ರಂಥಕರ್ತ

ಈ ನಾಟಕವನ್ನು

**ಮೊದಲ ಸಲ ರಂಗಭೂಮಿಯ ಮೇಲೆ**

**ಶ್ರೀ. ಹುಯಿಲುಗೋಳ ನಾರಾಯಣರಾಯರ ಸನ್ಮಾನಸಮಾರಂಭದಲ್ಲಿ**

೧೭—೧—೧೯೫೩ರ ರಾತ್ರಿ

ಗದುಗಿನ ಶ್ರೀ ಸರಸ್ವತಿ ಥಿಯೇಟರಿನಲ್ಲಿ

**ಕಲೋಪಾಸಕ ಮಂಡಲದ ಸದಸ್ಯರಿಂದ**

ಅಭಿನಯಿಸಲ್ಪಟ್ಟಿತು.

ಮತ್ತು

ಎರಡನೆಯ ಸಲ ರಂಗಭೂಮಿಯ ಮೇಲೆ

೧೬—೨—೧೯೫೨ರ ರಾತ್ರಿ

ಬೆಳಗಾವಿಯ ಶ್ರೀ ಕೃಷ್ಣ ಟಾಕೀಜಿನಲ್ಲಿ

ಅಭಿನಯಿಸಲ್ಪಟ್ಟಿತು.

**ಆಗ ಪಾತ್ರವಹಿಸಿದವರು :**

೧. ನಟ .... .... .... ಕು. ನೆಗಳೂರ
೨. ಸೂತ್ರಧಾರ .... .... .... ಶ್ರೀ ವಿ. ಎಚ್ ಲಕ್ಷ್ಮೇಶ್ವರ
೩. ಕನಕರಾಯ .... .... .... ,, ರಾಮಾಚಾರ್ಯ ಜೋಶಿ
೪. ಸರ್ವೋತ್ತಮ .... .... .... ,, ಭೀಮಸೇನ ಜೋಶಿ
೫. ಮಲ್ಲಿನಾಥರಾಯ .... .... ,, ಗುರಾಚಾರ್ಯ ಜೋಶಿ
೬. ಚಿನ್ನಮುದ್ದಣ್ಣಾಚಾರ್ಯ .... ,, ಕೃಷ್ಣಾಚಾರ್ಯ ಪೂಜಾರ
೭. ಮಾಚಣ್ಣಶೆಟ್ಟಿ .... .... .... ,, ಹಣಮಂತರಾವ ಕುಲಕರ್ಣಿ
೮. ಬಿಚ್ಚುನಾಥರಾಯ ... .... ,, ಮಲ್ಲಾರಿರಾವ ಕುರ್ತಕೋಟಿ
೯. ಏಬ್ರಾಂ .... .... .... ,, ರಂಗನಾಥ ನೆಗಳೂರ
೧೦. ಶಾಂತಣ್ಣ .... .... .... ,, ಗುರುರಾವ್ ಮೇದಿನಾಪುರ
ಮತ್ತು ಶ್ರೀನಿವಾಸ ರೊಟ್ಟಿ
೧೧. ಬಿದ್ದಾಡಿ ... .... .... ,, ಆರ್. ಎ. ಕುಲಕರ್ಣಿ
೧೨. ಧವಳಾಬಾಯಿ .... .... ... ಕು. ಮಹಾಲಕ್ಷ್ಮಿ ಜೋಶಿ
೧೩. ಅಂಜನಾ .... .... .... ಶ್ರೀಮತಿ ಭಾರತೀದೇವಿ ಐರಣಿ
೧೪. ಚೆನ್ನಿ .... .... .... ಕು. ಕಲಾವತಿ ಕಲ್ಲೂರ.

# ಅಂಕ ~ ~ ~ ೧

[ ತೆರೆಯಲ್ಲಿ ]

## ನಾಂದಿ

ರಾಗ : ನಾಂದಿ ತಾಳ : ಆದಿತಾಳ

ಶ್ರೀ ಗಂಗಾಜನಕಂ ಕಾಯಲಿ । ಪ. ॥

ಭೋಗಾಯುಷ್ಯಗಳಂ ನಿಮಗೀಯಲಿ ॥ ಅ. ಪ. ॥

ಸದ್ಧರ್ಮಗಳಿಂ ಬಿದ್ದ ಜನಗಳಿಗೆ । ಬುದ್ಧಿಯು ಮೋಕ್ಷಸಶುದ್ಧಿಯು । ಕಲಿಸಲು
ತಿದ್ದಿ ಕುಕಲ್ಪನೆಗಳನು ಭಕುತರ । ನುದ್ಧರಿಸಲು ವಿಧವಿಧದಿಂ । ನಟಿಸುವ
ಗುಹಕ ಶಬರಿಯರ ಕುಲಗಳೆಣಿಸದೆ । ಬಹುದಯದಿಂ । ದೊಲಿದಾತನುದಾರನು
ಇಹಪರದೊಳು ಪತಿತರನುದ್ಧರಿಸಲು । ಮಹಿಯೊಳು । ಮೋಕ್ಷೇಲವತರಿಸುವ॥

[ ತೆರೆಯೇಳುವದು ]

## ದೃಶ್ಯ ೧.

[ ಕನಕರಾಯರ ಮನೆಯ ಪಡಸಾಲೆ]

[ ದೇವರ ಮನೆಯಿಂದ ಪೂಜೆಯ ಗಂಟೆಯ ಸಪ್ಪಳ. ನಂತರ ಎತ್ತರದ ದನಿಯಲ್ಲಿ "ಸರ್ವೋತ್ತಮಾ ! ಉದ್ಧಾರಯ ಮಾಂ" ಎನ್ನುವದಕ್ಕೆ ಸರ್ವೋತ್ತಮನು ಪ್ರವೇಶಿಸುತ್ತಾನೆ.

ನಡಿಗೆಯಲ್ಲಿ ನಿರಾಸೆಯ ಬೇಸರವಿದೆ. "ಓ ಬಂದೆ, ಬಂದೆ ! " ಎಂದು ಸ್ವಲ್ಪ ಅವಸರ ತೋರಿಸಿದಾಗ "ಸರ್ವೋತ್ತಮಾ ! ಉದ್ಧಾರಯ ಮಾಂ" ಎಂಬುದು ಮತ್ತೆ ಕೇಳಿಸುವದು. ಆಗ — ]

**ಸ** — ಓಹೋ ! ಇದು ಈ ಸರ್ವೋತ್ತಮನನ್ನಲ್ಲ, ಆ ಸರ್ವೋತ್ತಮನನ್ನು ಕರೆದದ್ದು ! ( ಕುರ್ಚಿಯ ಮೇಲೆ ಬೇಸರದಿಂದ ಕುಳಿತು ಗೋಣು ಹಿಂದಕ್ಕೆ ಚೆಲ್ಲುವನು. )

[ ಒಳಗೆ ಮಂತ್ರಗಳುಚ್ಚಾರಣೆ ]

ಅಪ್ಪಾಜಿವರ ದೇವರಪೂಜೆ ಪ್ರಾರಂಭವಾಗಿರಬೇಕು ಈಗ. (ವರ್ತಮಾನಪತ್ರ ತೆಗೆದುಕೊಂಡು ನೋಡಿ ) ಛೆ, (ಒಗೆದು) ನೌಕರಿ ಸಲುವಾಗಿ ಅರೆ ಎಷ್ಟಂತ ತಿರಿಗಾಡಬೇಕೂ ಅಂತೀನಿ ! ಗಳಿಸಿದ ಡಿಗ್ರಿ ಎಲ್ಲಾ ಗಾಳಿ ಪಟಾ ಆಗಿಹೋದವು. ಎಷ್ಟಾಡರೂ ಹಂಗಿನ ಕೂಳೇನು ತಪ್ಪಲಿಲ್ಲ. ಮನುಷ್ಯ ಈ ಒಂದು ಗೇಣು ಹೊಟ್ಟೆಗಾಗಿ ಎಷ್ಟು ಧಡಪಡಿಸಬೇಕೂ ಅಂತೀನಿ !

## ಹಾಡು

ರಾಗ : ಕೇದಾರಗೌಳ ತಾಳ : ಆದಿತಾಳ

ಆವ ಗತಿಗೆ ಬಂದಿತು ಹಾ । ಜೀವನಕಲಹ ॥ ಪ. ॥

ಸೇವೆಯೊಂದೆ ಮಾರ್ಗವೆ ಇದು ವಿನಾ । ಕೇವಲ ತಿರಿದುಣ್ಣುವುದೆ ಪುನಹ ॥
ಕೈಗೆಲಸಗಳುದ್ಯೋಗಗಳಿಲ್ಲ । ನೀಗಿದುವ್ಯ ವ್ಯಾಪಾರಗಳಿಲ್ಲ ॥
ಮಾಗಿಯು ಬಾಳ್ಕೆಗೆ ವಿಧಿ ಬಲವಿಲ್ಲ । ಬಾಗಿ ದುಡಿವೆನೆಂದೇವೆ ದುಡಿತಿಲ್ಲ ॥

[ ಒಳಗೆ ಮಂತ್ರೋಚ್ಚಾರಣೆಯೊಂದಿಗೆ ಮಂಗಳಾರತಿ ಗಂಟೆ ]

ಓ ! ಅಪ್ಪಾವರ ಪೂಜೆ ನೈವೇದ್ಯಕ್ಕ ಬಂತು ಕಾಣಸತದ. ಪೂಜೀ ಮುಗಿಸಿಕೊಂಡು ಇನ್ನು ಗುಡಿಗೆ ಹೋಗಲಿಕ್ಕೆ ಹೊರಗ ಬರವರು. ಬಂದ ಗಳಿಗ್ಗೆ ನಾವು ಅವರ ಕಣ್ಣಿಗೆ ಬೀಳವರು. ಮೊದಲನೇ ಮಾತs ನೌಕರೀ ಮಾತು ತಗಿಯೋವರು. ಏನು ಹೇಳಬೇಕು ? ಮತ್ತೇನು, ಸಿಗಲಿಲ್ಲಾ ಅಂತ. ಅಲ್ಲಿಂದೇನು ಸುರುವಲ್ಲ, ಗುಡುಗು, ಮಿಂಚು, ಸಿಡ್ಲು, ಮಳಿ ! ನೌಕರಿ ಸಿಗದೆ ಇನ್ನದ್ದೇನು ನಂದs ತಪ್ಪು ಅಂಬವರ್ಹಾಂಗ ಸುರುವು ಮಾಡತಾರ ಸಹಸ್ರನಾಮಾವಳಿ ! ನನಗೂ ಒಮ್ಮೊಮ್ಮೆ ಹೀಂಗ ಅನಸತದ, ನಾ ಹುಟ್ಟಿದ್ದs ತಪ್ಪೇನೋ ಅಂತ. ನಾನೂ ಬೇಕಾದಷ್ಟು ವಾದಾ ಹಾಕಿ ನೋಡಿದೆ ಅವರ ಕೂಡ. ಬದುಕಬೇಕಾದರ ನೌಕರಿಯಿಂದsನ ಯಾಕ ಅಂತ ನಂದು; ನೌಕರಿ ಇಲ್ದೆ ಬದುಕಲಿಕ್ಕೇ ಸಾಧ್ಯವಿಲ್ಲಾ ಅಂತ ಅವರದು. ಇದು ಕೂಡಬೇಕು ಹ್ಯಾಂಗ ? ಅವರ ದರ್ಪದ ಅಂಜಿಕೆಯೊಳಗ ಬೆಳೆದ ನನಗ ಅವರ

ಮಾತು ನೋಡಿದ್ರೊ ಧೈರ್ಯನೂ ಇಲ್ಲ; ಶಕ್ತಿನೂ ಇಲ್ಲದ್ಹಾಂಗ ಆಗೇದ. ಆದರೂ ಒಳಗಿನ ಕುದಿ ಯಾವಾಗ ಉಮ್ಮಳಿಸಿ ಹೊರಗ ಬರತದೋ ಏನೊ !

[ ಮಂತ್ರಗಳೊಡನೆ ಕೊನೆಯ ಮಂಗಳಾರತಿಯ ಗಂಟೆ ]

ಕಡೀ ಮಂಗಳಾರತಿ ಕಾಣಸ್ತದ. ಇನ್ನ ದೇವರನ್ನ ಭುಜಂಗಿಸಿ ಹೊರಗ ಬರೋವರು ; ನಮ್ಮನ್ನ ನೋಡಿ ನಮಗೂ ಅಷ್ಟು ಮಂಗಳಾರತಿ ಮಾಡೋವರು. ಮಾಡ್ಲಿ, ಮಾಡ್ಲಿ. ತಯಾರಾಗೋಣೆನ್ನ ಬಂದದ್ದಕ್ಕೆ ತಲಿ ಕೊಟ್ಟು ನಿಲ್ಲಲಿಕ್ಕೆ. ಇಂಥವರೆದುರಿಗೆ ನಾಯೇನಾರೆ ಸಮಾಜಸೇವಾ, ದೇಶಸೇವಾ ಮಾಡಬೇಕೂ ಅಂತೀನಿ ಅಂದ್ರ, ನನ್ನ ಅವತಾರಸಮಾಪ್ತಿಯಾರೆ ಮಾಡತಾರ ಇಲ್ಲಾಂದರ, ನನ್ನ ಹುಚ್ಚರ ಆಸ್ಪತ್ರೆಗಾರ ಹಾಕತಾರ. ಇಂಥಾ ಮಾತು ಸಹಿತ ಇವರ ಮನೀ ಹೊಸ್ತಿಲದೊಳಗ ಬರೋಹಾಂಗಿಲ್ಲ. ಅಸ್ಪೃಶ್ಯರಿದ್ಹಾಂಗ ಅವೂ. ( ತೆರೆಯ ಕಡೆಗೆ ನೋಡಿ ) ಬಂದರ ಕಾಣತದ. ( ವರ್ತಮಾನಪತ್ರವನ್ನು ಮುಖಕ್ಕೆ ಒಡ್ಡಿಕೊಂಡು ಕೂಡುವನು. )

[ ಕನಕರಾಯರು ಮಡಿಯಿಂದ ದೇವರ ಗುಡಿಗೆ ಹೋಗುವದಕ್ಕಾಗಿ ಕೈಯಲ್ಲಿ ಥಾಲಿ ಹಿಡಿದುಕೊಂಡು, ಬಾಯಲ್ಲಿ ವಟವಟ ಮಂತ್ರ ಎನ್ನುತ್ತ ಬಂದು, ಸರ್ವೋತ್ತಮ ಬಂದು ಕುಳಿತಿರುವದನ್ನು ನೋಡಿ ಆಶ್ಚರ್ಯದಿಂದ ಹಿಂದೆ ಸರಿದು ನಿಂತು ]

**ಕ** — ಎಲಾ ! ಸರ್ವೋತಮ ! ಇಲ್ಲೆ ಕೂತಾನಲ್ಲ ! (ಸರ್ವೋತ್ತಮನ ಕಡೆಗೆ ನೋಡಿ) ಸರ್ವೋತ್ತಮಾ !

**ಸ** — ( ಓದಿನ ಗುಂಗಿನಲ್ಲಿ ಉತ್ತರಿಸುವದಿಲ್ಲ )

**ಕ** — ಸರ್ವೋತ್ತಮಾ !

**ಸ** — (ನಿದ್ದೆಯಿಂದ ಎಚ್ಚತ್ತವನಂತೆ) ಆಂ ! (ಕುರ್ಚಿಯಿಂದ ಎದ್ದು) ಏನು ?

**ಕ** — ಏನಾತ್ಯ ಕೆಲಸದ್ದು ? ಎಲ್ಲಾದರೂ ನೌಕರಿ ಸಿಕ್ಕಿತೋ, ಏನು ಹಾಂಗs ಬಂದ್ಯೋ ಉಧೋ ಲಕ್ಷ್ಮಣಾಽಂತ ?

**ಸ** — ಎಲ್ಲಿ ಹೋದರೂ " No Vacancy. "

**ಕ** — ಸಾಲಿಯೊಳಗೂ ? ಕುರಿಕಾಯೋದೆ ಯಾಕಾಗವಲ್ಲದು, ಒಂದು ಮಾಸ್ತರಿಕೀನೂ ಇಲ್ಲs ?

**ಸ** — ಉಹುಂ.

**ಕ** — ಹಂಗಾದರ ಮುಂದೇನು ಗತಿ ? ಹಿಂಗs ಮನ್ಯಾಗ ಕೂತು ಅಶ್ಲನ ಕೆಚ್ಚ್ಯಾವ ಅನ್ನು. ಮೂರು ಸಾವಿರ ರೂಪಾಯಿ ಹಾಳು ಮಾಡಿ "ಬಿ. ಎ" ಬಡಕೊಂಡಿ. ಯಾತಕ್ಕದು ? ಆದರಿಂದೇನಾದರೂ ತಿರಿಗಿ ? ಹೋಗಲಿ, ಗಂಟು ಬರದಿದ್ದರ ಇಲ್ಲ. ಆದರ ವ್ಯಾಲಿನ ಬಡ್ಡಿಯಷ್ಟರೆ ? ಅಷ್ಟಾ ಗಳಿಸಲಿಕ್ಕಾಗದ ನಿನ್ನ ಈ ಸುಟ್ಟ ಮಾರಿ ತೋರಿಸೂವಕ್ಕಿಂತ ಎಲ್ಲ್ಯಾರ ಭಿಕ್ಷಾನರೆ ಬೇಡಲಿಕ್ಕೆ ಹೋಗು, ಭಿಕ್ಷಾ !

**ಸ** — ( ತಗ್ಗಿಸಿದ ತಲೆ ಮೇಲಕ್ಕೆತ್ತಿ ವಿರೋಧಿಸುವ ದನಿಯಲ್ಲಿ ) ನಿಮ್ಮ ಆಶೀರ್ವಾದ ಇದ್ದರ ಅದೂ ಆದೀತು.

**ಕ** — ಆಂ ! ಸರ್ವೋತ್ತಮಾ ! ಏನು ? ಏನಂದಿ ? ( ಅಣಕಿಸುತ್ತ ) "ನಿಮ್ಮ ಆಶೀರ್ವಾದ ಇದ್ದರ ಅದೂ ಆದೀತು" ( ಚುಚ್ಚುವಾತಿನಲ್ಲಿ ) ಹೂಂ, ಅದೂ ಆಗಲಿ. ಅದನ್ನಿಷ್ಟು ನಮ್ಮ ತಲೀಗೆ ಕಟ್ಟು. ಇಂಥಾ ಕನಕರಾಯರ ಮಗಾ ಭಿಕ್ಷಾ ಬೇಡತಾನ ಅಂದ್ರ, ಎಷ್ಟು ಶೋಭಾ ! ನನಗೂ ಮರ್ಯಾದಿ, ನಿನಗೂ ಮರ್ಯಾದಿ. ಹಾಂಗs ಮಾಡಪಾ, ಹಾಂಗs ಮಾಡು. ಇಕಾ ಸರ್ವೋತ್ತಮಾ, ಇಲ್ಲಿ ಹೇಳತೇನಿ ಕೇಳು : ನಾನಂತೂ ನಿನ್ನ ಹಿಂಗ ಮನಿಯೊಳಗ ಕೂಡಿಸಿ ಇನ್ನಮ್ಯಾಲ ಕೂಳು ಹಾಕೂದಿಲ್ಲ ಎಲ್ಲಿ ಬೇಕಾದಲ್ಲೆ ಹಾಳಾಗಿ ಹೋಗು, ಹೊಲೇರ್ನ ಕೂಡಿಕೊಂಡು. ( ಕಾಲು ಅಪ್ಪಳಿಸುವನು )

**ಸ** — (ಉದ್ರೇಕಗೊಳ್ಳದೆ, ಶಾಂತನಾಗಿ ಧೈರ್ಯದಿಂದ) ನಿಮ್ಮ ಮನಸ್ಸಿನಾಗ ಇಷ್ಟಿದ್ದರ ಹಾಂಗs ಆಗಲಿ. ಹೋಗ್ತೇಬಿಡತೇನಿ.

[ ಹೊರಟು ಹೋಗುವನು ]

**ಕ** — ಹೋದರ ಹೋದಿ, ಬುಷ್ಟ ಟನ್ನ ತಂದು !

[ ತೆರೆಯಲ್ಲಿ ]

**ಹಾಡು**

" ಹೊಲತಿ ಹೊಲೆಯು ಇವರವರಲ್ಲ | ಹೊಲಿಗೇರಿಲಿ
ಹೊಲೆಯು ಹೊಲತಿಲ್ಲ ....... " **ಯಪ್ಪಾ !**

**ಕ—** ಥೂ ! ಸೂಲೆಮುಂಡೇ ಮಗ್ಗ ಹೊತ್ತಿಲ್ಲ, ವ್ಯಾಳ್ಯಾ ಇಲ್ಲ. ನಟ ನಟ ಮಧ್ಯಾನ್ನದಾಗ ಬಂದು ತನ್ನ ಧ್ವನಿ ಕೇಳಿಸಿ ವೈಲಿಗಿ ಮಾಡಿಟ್ಟ. ಮತ್ತ ಹೋಗಿ ಇನ್ನ ನೀರ ಬಸಕೋಬೇಕಾಯ್ತು.

[ ತೆರೆಯಲ್ಲಿ ]

**ಹಾಡು**

"ಮಡಿಮಡಿ ಎಂದು ಮೂರುವಾರು ಹಾರುತಿ
ಮಡಿ ಎಲ್ಲಿಂದ ಬಂತೋ ಬಿಕನಾಸಿ........"

( ಬಾಗಿಲಲ್ಲಿ ನೋಡಿ ) ಥೂ ! ಹಾಡಿ ವೈಲಿಗಿ ಮಾಡಿದ್ದು ಸಾಕಾಗದ ಮತ್ತ ಎದುರಿಗೆ ಬಂದು ನಿಂತ್ಯೇನು ? ಆಲ್ಲೋ, ಏ, ನನಗ ಮುಡಿ ಕಲಿಸ ಲಿಕ್ಕೆ ಬಂದೀದ್ಯಾ ? ನಿನ್ನ ಸೂಕ್ಕಾರೆ.... ( ಕೈಯಲ್ಲಿಯ ಥಾಲಿಯನ್ನು ಅವನ ಕಡೆಗೆ ಒಗೆಯುವನು. )

[ ತೆರೆಯಲ್ಲಿ ]

**ಅಯ್ಯೋ ಯಪ್ಪಾ ! ಸತ್ತೆ ! ಸತ್ತೆ !**

**ಕ—** ಸಾಯಿ, ಮುಂಡೇಮಗನೆ ! ಸಾಯಿ ! ಇನ್ನ ಬಿಸಿ ನೀರೇ ನಾದರೂ ಆವನೋ, ಏಸು ಥಣ್ಣೀರs ಸುರುವಿಕೋಬೇಕಾಗತದೊ ?

[ ರಭಸದಿಂದ ಮತ್ತೆ ಒಳಗೆ ಹೋಗುವನು ]

---

## ದೃಶ್ಯ ೨.

[ ಕನಕರಾಯರ ಮನೆಯ ಮುಂದಿನ ಬೀದಿ ]

[ ಸರ್ವೋತ್ತಮನು ಶಾಂತಣ್ಣನ ಕೈಹಿಡಿದು ಕರೆದುಕೊಂಡು ಬರುತ್ತಾನೆ. ]

**ಶಾಂ** — ಯಪ್ಪಾ, ನೀವ್ಯಾಕ ನನ್ನ ಮುಟ್ಟಿದಿರಿ ತಂದೆ ! ಹೊಲೆನನ ಮಗ ನಾನು. ನಮ್ಮನ್ನ ಮುಟ್ಟಬಾರದ್ರೀ ಯಪ್ಪಾ ನಿಮ್ಮಂತವರು !

**ಸ** — ಅಡ್ಡಿ ಇಲ್ಲೇಳು ಮುದಕಪ್ಪಾ. ನಿಂದ್ರು, ಮೊದಲ ನಿನ್ನ ಮಾರೀಮ್ಯಾಗಿನ ರಕ್ತಾ ಅರೆ ಒಂದಿಷ್ಟು ತೊಳಿತೀನಿ. ಇಲ್ಲೆ ಸ್ವಲ್ಪ ಕೂತಕೊ. ಹೋಗಿ ನೀರು ತರತೀನಿ.

**ಶಾಂ** — ಅಡಟಿಲ್ಲಾ ಯಾಕೊ ಯಪ್ಪಾ? ಇಲ್ಲೆ ಮಲಗತೀನಿ. ನೀರು ತಂದು ಹಣಿಸಿಬಿಡ್ರಿ ಯಪ್ಪಾ. ನಾಯೆಲ್ಲಾ ತೊಳಕೊಂತೀನಿ. ಈ ಹೊಲೆ ಸೂಳೆ ಮಕ್ಕಳಿಗೆ ಈಟಾರೆ ಯಾರು ಮಾಡವರು ತಂದೆ?

**ಸ** — ಹಂ ತಡಿ. ಇತ್ತಲಾಗs ಯಾರೋ ಬರಲಿಕ್ಕೆ ಹತ್ಯಾರ, ಕೈ ಯಾಗ ತಂಬಿಗಿ ಹಿಡಕೊಂಡು. ಕೇಳತೇನಿ ಆವರ್ನ.

[ ಮಾಚಣ್ಣಶೆಟ್ಟಿಯ ಪ್ರವೇಶ ]

**ಮಾ** — ಶಿವಾ ! ಶಿವಾ ! ಬಸವೇಶ್ವರಾ, ಉದ್ಧಾರ ಮಾಡು ಬಸವೇಶ್ವರಾ. ಶಿವಾ ! ಶಿವಾ !

**ಸ** — ( ತಡೆದು ) ಶೆಟ್ಟರ, ಆ ನಿಮ್ಮ ತಂಬಿಗೆಯೊಳಗಿನ ನೀರಷ್ಟು ಕೊಡತೀರಾ ? ಪಾಪ, ಈ ಮುದುಕನಿಗೆ ಪೆಟ್ಟು ತಾಕಿ ರಕ್ತ ಬಂದದ, ಅದನ್ನಿಷ್ಟು ತೊಳೀತೀನಿ.

**ಮಾ** — (ಸರ್ವೋತ್ತಮನ ಮುಖವನ್ನೊಮ್ಮೆ, ಆ ಮುದುಕನ ಮುಖವನ್ನೊಮ್ಮೆ ನೋಡಿ ) ಶಿವ್ ಶಿವ್ ಶಿವ್ ಶಿವ್ ! ಹಂ, ಅದ್ಯಾಂಗಾದೀತರಿ ?

ಶಿವಪೂಜಿಗೆ ಹೊಂಟೇನಿ; ಈ ನೀರು ಕೊಡಾಣ್ರಿ. ( ಆಪಾದಮಸ್ತಕ ಸರ್ವೋತ್ತಮನನ್ನು ನೋಡಿ ) ಆಲ್ರಿ, ತಾವು ಹಾರೂರು ಅಲ್ರಿ ?

ಸ — ಅದೇನಾರ ಇರಲಿ ಶೆಟ್ಟರ, ದಯಮಾಡಿ ಒಂದಿಷ್ಟು ನೀರು ಕೊಡತೀರಾ ?

**ಮಾ** — ಛಿ ಛಿ ಛಿ ! ಆ ಮಾತು ತಗೀಬ್ಯಾಡ್ರಿ ನೋಡಿರಿ. ಎಷ್ಟು ಶೀಲ, ಎಷ್ಟು ಆಚಾರ ಹೇಳತೀರಲ್ಲೊ ಯಪ್ಪಾ ನೀವು ಹಾರೂರು ! ಎಲ್ಲಿ ಹೋತು ನಿಮ್ಮ ಶೀಲ ? ( ಶಾಂತಣ್ಣನ ಕಡೆಗೆ ಹೋಗಿ ) ಅಬಾಬಬ ! ಏಟು ಗಡತರ ಗಾಯ ಆಗೇತಲ್ಲರಿ ? ಯಾರಾದರೂ ಹೊಡಗಿಡದಾರೇನ್ರಿ ಇವನ್ನ ? ಮೊದಲ ಆ ಹೊಡದವರ ಮ್ಯಾಗ ಫಿರ್ಯಾದಿ ಮಾಡಬಾರದ್ರ್ಯಾ ? ಅವನ್ನ ತುರಂಗಕ್ಕ ಕಾಣಸೋಣಂತ.

**ಶಾಂ** — ( ಸ್ವಲ್ಪ ಎದ್ದು ಕುಳಿತು )ಯಪ್ಪಾ ಕಾಲು ಬಿದ್ದೆ. ಅಟು ಮಾತ್ರ ಮಾಡಬ್ಯಾಡ್ರಿ. ಫಿರ್ಯಾದಿ ನಮಗ್ಯಾಕರಿ ? ಓಟು ನೀರು ಹಣಿಸಿ ಬಿಡ್ರಿ ಸಾಕು ; ಗಾಯಾ ತೊಳಕೊಂತೀನಿ.

**ಮಾ** — ಹಂ ಹಂ. ಹೌದಲೆ ಗೆಣೆಯಾ. ಹಾಂಗ ಬಂದಿ ಆನ ಬಾರದs ಮುಂದ. ನಿನಗ–ಕಾಣಾ ಕಾಣಾ ಹೊಲ್ಯಾಗ – ನೀರು ಹಾಕಿ ನಮ್ಮ ಶೀಲಾ ಕೆಡಿಸಿಕೊಳ್ಳಲ್ಯಾ ?

**ಸ** — ಶೆಟ್ಟರ ಇದರಾಗ ಶೀಲ ಎಲ್ಲಿ ಹೋಗತದ ? ಇನ್ನೊಬ್ಬರ ಆಪತ್ತಿಗೆ ಆಗೋದು ಶೀಲಾ ಕಳಕೊಂಡ್ಹಾಂಗ ಅಲ್ಲ ಶೆಟ್ಟರ. "ದಯಾವೇ ಧರ್ಮದ ಮೂಲವಯ್ಯಾ " ಅಂತ ವಚನ ಕೇಳಿಲ್ಲs ?

**ಮಾ** — ಎಲ್ಲಾ ಗೊತ್ತೈತೇಳ್ರಿ.

[ ಹೊರಟು ಹೋಗುವನು ]

**ಸ** — ಮುದಕಪ್ಪಾ, ಅವರಂತೂ ಹೋದರು. ನಾನs ಹೋಗಿ ಇಲ್ಲೆ ಎಲ್ಯಾರ ಒಂದಿಷ್ಟು ನೀರು ಇಸಕೊಂಡು ಬರತೀನಿ. ಅಲ್ಲೀ ತನಕ ಇಲ್ಲೇ ಈ ನೆಳ್ಳಿಗೆ ಕೂತಿರು. ( ಕೈಹಿಡಿದು ಮುತ್ತೆ ಮುಂದೆ ಒಯ್ದು ಕೂಡಿಸುವನು)

**ಶಾಂ** — ಯಪ್ಪಾ, ಏನ್ಮಾಡತೀರಿ ಬಿಡ್ರಿ, ನಿವಾರs ಅವಟು ಯಾಕ ಒದ್ದಾಡತೀರಿ ? ನಮ್ಮ ಹೊಲೇರ ಜನ್ಮಾನs ಅಂಥಾ ಕೆಟ್ಟದ್ದೈತಿ.

[ ಅಂಜನಾ ಪ್ರವೇಶಿಸುವಳು ]

**ಅಂ** — (ಸರ್ವೋತ್ತಮನ ಬೆನ್ನ ಹಿಂದೆ ಬಂದು) ಏನಾಗೇದ ರಾಯರ ಇವನಿಗೆ ? ( ಮುಂದೆ ಬಂದು ಶಾಂತಣ್ಣನನ್ನು ನೋಡಿ ) ಓ ! ರಕ್ತ ಸೋರ ಲಿಕ್ಕೆ ಹತ್ತೇದಲ್ಲ ! ಅಯ್ಯೋ ಪಾಪ ! ಹಣೆ ಒಡೆದು ಹೋಗಿದೆಯಲ್ಲ !

**ಸ** — ( ಹಿಂದಿರುಗಿ ನೋಡಿ ) ಕ್ಷಮಿಸಬೇಕು. ಒಂದು ಸ್ವಲ್ಪ ಇಲ್ಲೇ ಹೋಗಿ ನೀರು ತಂದು ಕೊಡತೀರಾ ? ಬಹಳ ಉಪಕಾರ ಮಾಡಿದ್ಹಾಂಗ ಆಗತದ.

**ಅಂ** — ( ಕೈವಸ್ತ್ರಕೊಟ್ಟು ) ಇಕಾ, ಇದನ್ನ ತಕ್ಕೊಳ್ರಿ. ಆ ಗಾಯಾ ಅಷ್ಟು ಇದರಿಂದ ಒರಸತಿರ್ರಿ. ಅಷ್ಟರಾಗ ನಾ ಹೋಗಿ ನೀರು ತರತೇನಿ.

[ ಹೋಗುವಳು ]

**ಸ** — ( ಕರವಸ್ತ್ರನೋಡಿ ) ಆಹಹಹ ! ಎಂಥಾ ಬುದ್ಧಿ ನಂದು ! ನನ್ನ ಹತ್ತರs ಕೈವಸ್ತ್ರ ಇದ್ದರೂ ಅದನ ಉಪಯೋಗಿಸಬೇಕೂ ಅಂತ ಹೊಳೀಬಾರದs ನನ್ನ ಮಂಕುಬುದ್ಧಿಗೆ ! ಇರಲಿ. ಈ ಕೈಯಿಂದ ಬಂದ ಈ ವಸ್ತ್ರಾನ ಯಾಕ ಕೆಡಿಸಬೇಕು ? ನಂದs ಉಪಯೋಗಿಸಿದರಾಯಿತು. ( ಆ ವಸ್ತ್ರ ಕಿಸೆಯಲ್ಲಿಟ್ಟು ತನ್ನ ವಸ್ತ್ರ ಹೊರಗೆ ತೆಗೆದು ಗಾಯ ಒರಿಸುತ್ತ ) ಈಗ ಹ್ಯಾಂಗದ ಮುದಕಪ್ಪಾ ?

**ಶಾಂ** — ಹಾ ! ಹಾ ! ಹಾ !

**ಸ** — ಸ್ವಲ್ಪ ತಡಿ. ಅಕಾ ಬಂದರು, ನೀರು ತಂದಿರಬೇಕು.

[ ಅಂಜನಾ ನೀರು ತಂದು ಗಾಯದ ಮೇಲೆ ಹಾಕುವಳು. ಸರ್ವೋತ್ತಮ ಗಾಯ ತೊಳೆದು ಕರವಸ್ತ್ರದಿಂದ ಹಣೆ ಕಟ್ಟುವನು. ]

**ಶಾಂ** — ( ಏಳಲು ಗಡಿಬಿಡಿ ಮಾಡುತ್ತ ) ಯಪ್ಪಾ, ನಿಮ್ ಹೊಟ್ಟಿ ತಣ್ಣಗಾಗಲಿ ! ದೇವರು ನಿಮ್ಮಿಬ್ಬರಿಗೂ ಕಲ್ಯಾಣ ಮಾಡಲಿ. ಬಿದ್ದವನ್ನ ಎತ್ತಿ ಹಿಡಿದಿರಿ. ಪುಣ್ಯೇವು ಬಂತು ನಿಮಗ.

**ಸ —** ( ಕೈಹಿಡಿದು ) ಹಂ, ಹಂ, ಸಾವಕಾಶ ಏಳು ಮುದಕಪ್ಪಾ ! ಸಾವಕಾಶ. ಒಮ್ಮೆಲೆ ಎದ್ದರ ತಲಿ ತಿರಿಗಿ ಮತ್ತ ಬಿದ್ದೀ. ಹೆಸರೇನು ನಿಂದು ಮುದಕಪ್ಪಾ ?

**ಶಾಂ —** ಹೆಸರ್‍ರೀ ? ಸಾಂತಣ್ಣ ಸಾಂತಣ್ಣ ಅಂತ ಕರೀತಾರ್‍ರಿ.

**ಸ —** ಓಹೊ ! ಪಾಡೈತಿ ಬಿಡು ಹೆಸರು. ಹೆಸರಿಗೆ ತಕ್ಕಾಂಗs ಅದೀದಿ.

**ಅಂ —** ನೋವು ಕಡಿಮೆ ಆಯಿತs ?

**ಶಾಂ —** ಹೂನ್ರಿ ಯವ್ವಾ. ಓಟೋಟs ಕಡಿಮಿ ಆಗಾಕ ಹತ್ತೈತ್ರಿ.

**ಅಂ —** ಮುದಕಪ್ಪಾ, ನಿನ್ನ ಮನಿ ಎಲ್ಲೈತಿ ? ಹೆಂಡರು ಮಕ್ಕಳು ಅದಾರಿಲ್ಲೊ ?

**ಶಾಂ —** ಯವ್ವಾ, ನನಗೆಲ್ಲೀ ಹೆಂಡ್ರು ಮಕ್ಕಳ್ರೀ ! ದಿಕ್ಕೇಡಿ ನಾನು ! ನನಗ್ಯಾರು ಅದಾರ್‍ರೀ ಯವ್ವಾ ! ಇದ್ದ ಒಬ್ಬ ಮಗನ್ನ ಮನಿ ಹಿರ್‍ಯಾಳು ಸಾವುತ್ಲೂ ಒಬ್ಬ ಪಾದ್ರಿಸಾಬಾ ಕರಕೊಂಡು ಹೋಗಿಬಿಟ್ಟನ್ರಿ. ಆ ಮಾತಿಗೆ ನೋಡ್ರಿ ಆಗಲೆ ಇಪ್ಪತ್ ಇಪ್ಪತ್ತೈದು ವರ್ಸ ಆಗಿರಬೇಕ್ರಿ. ಅವನ ಸುದ್ದೀನ ಇಲ್ರಿ. ಮನ್ಯಾಗಾರ ಯಾರು ಅದಾರ್‍ರಿ ಕೂಳು ಕುಚ್ಚಿ ಹಾಕಾಕ ! ಹೀಗs ಕಾಲಾ ಹಾಕ್ಕೇನಿ ಅತ್ರಿ, ಬಿಕ್ಕಿ ಬೇಡಿಕೊಂಡು ತಿನಕೊಂತ.

**ಅಂ —** ಅಯ್ಯೋ ಪಾಪ !

**ಶಾಂ —** ಹೂನ್ರಿ ಅದs ಮತ್ತ. ಇನ್ನೇನು ? ( ಏಳುವನು )

**ಅಂ —** ( ಸರ್ವೋತ್ತಮನಿಗೆ ) ಅಲ್ಲ, ಕ್ಷಮಿಸಬೇಕು, ತಾವು ಅಪರಿಚಿತರು. ತಮ್ಮ ಕೂಡ ಮಾತಾಡೋದು ಅಧಿಕಪ್ರಸಂಗ ಆದೀತು. ಆದರೂ ........

**ಸ —** ಉಹೂಂ, ನಾನs ತಮ್ಮ ಕ್ಷಮಾ ಕೇಳಬೇಕು. ಗಡಿಬಿಡಿ ಯೊಳಗ ಯಾರು, ಏನು ನೋಡದವ ತಮಗ ನೀರು ತರಲಿಕ್ಕೆ ಹೇಳಿಬಿಟ್ಟೆ.

**ಅಂ —** ಅದರಾಗೇನದ ಕ್ಷಮಾ ಕೇಳುವಂಥಾದ್ದು ? ಪ್ರಸಂಗಕ್ಕೆ ಯಾರಿದ್ದರೂ ನೆರವಾಗಬೇಕಲ್ಲs ?

**ಸ** — ಹೌದು. ಆದರ ನೀವು ಕ್ಷಮಾ ಬೇಡಿಯೇ ಪ್ರಾರಂಭಿಸಿ ಬಿಟ್ಟಿರಲ್ಲ ನಿಮ್ಮ ಮಾತು !

**ಅಂ** — ಹಃ ಹಃ ಹಃ ಇಲ್ಲ, ಏನಾತ್ಯ ಇಷ್ಟು ರಕ್ತ ಬರಲಿಕ್ಕೆ ಈ ಮುದುಕಗ ? ಏನು ಬಿದ್ದಗಿದ್ದನೇನು ?

**ಸ** — ಇಲ್ಲಾ....

**ಅಂ** — ಹಂಗಾದರ ಯಾರಾರೆ ಹೊಡದಗಿಡದನೇನು ?

**ಸ** — ಹೌದು. ನಮ್ಮ ತಂದೀನೇ ಹೊಡದರು.

**ಅಂ** — ಆಂ ! ಯಾಕ ?

**ಸ** — ನಿಮಗ ಈಗಿನವರಿಗೆ ಆಶ್ಚರ್ಯ ಅನಿಸಬಹುದು ; ಇಲ್ಲಾ ಇದೇನು ಹುಚ್ಚುಚಾಷ್ಟಾರ ಅಂತ ನಗೀನೂ ಬರಬಹುದು. ಆದರ ಆದ ಸಂಗತಿ ಹೀಂಗದ : ತಂದೆ ಮಡಿಯೊಳಗಿದ್ದರು. ಇವನ ಧ್ವನಿ ಕೇಳಿಸಿತು. ಈತ ಅಂತ್ಯಜ. ಮಡಿಯಲ್ಲಿದ್ದಾಗ ಈತನ ಧ್ವನಿ ಕೇಳಬಾರದಂತೆ. ಕೇಳಿದರೆ ಮೈಲಿಗೆಯಂತೆ. ಮೈಲಿಗೆಯಾಯಿತು. ಅಷ್ಟಕ್ಕೇ ಸಾಲದೆ ಈತ ದರ್ಶನ ಬೇರೆ ಕೊಟ್ಟ. ಅದು ಅದಕ್ಕೂ ಕೆಡುಕಂತೆ. ಮೊದಲಿಗೇ ಮೈಲಿಗೆಯಾದ ದ್ದಕ್ಕೆ ತುಂಬಿದ ಒಳಗಿನ ಸಿಟ್ಟು ಈ ದರ್ಶನದಿಂದ ಹೊರಬಿತ್ತು. ಕೈಯ ಲ್ಲಿಯ ಥಾಲಿಯನ್ನೇ ಒಗೆದುಬಿಟ್ಟರು ಈತನ ಕಡೆಗೆ. ಹಣೆಗೆ ಬಡಿಯಿತು. ಈ ಅನಾಹುತವಾಯಿತು. ಇದರಿಂದ ಅವರಿಗೇನೂ ಅನಿಸಿಯೇ ಇಲ್ಲ. ಆ ಮನಸ್ಸು ಬೆಳೆದದ್ದೇ ಹಾಗೆ.

**ಅಂ** — ಓ ! ಅರ್ಥವಾಯಿತು. ನಿಜ, ನಿಜ ನಮ್ಮ ಸಮಾಜ ನಿಂತದ್ದೇ ಇಂಥಾ ನಂಬಿಕೆಗಳ ಮೇಲೆ. ಕೆಳಗಿನ ಆಧಾರ ತಪ್ಪಿ ಮೇಲಿನ ಭಾರ ಹೆಚ್ಚಾಗಿ, ಈಗೋ ಇನ್ನೊಂದು ಗಳಿಗ್ಗೊ ಮುರಿದುಬೀಳಲಿಕ್ಕಾದ ಕಂಬಗಳ ಗತಿಯಾಗಿದೆ ಈ ನಂಬಿಕೆಗಳ ಗತಿ. ಅವುಗಳ ಕಾಲ ಒಂದಿತ್ತು. ಈಗ ಅವಕ್ಕೆ ಶಕ್ತಿ ಇಲ್ಲ; ದೃಷ್ಟಿ ಇಲ್ಲ. ಮಾನವಕುಲ ಎಲ್ಲಾ ಒಂದು. ಈ ಮಡಿ ಮೈಲಿಗೆ ಮನಸ್ಸಿನ ರೋಗ. ಹುಟ್ಟಿನಿಂದ ಬಂದ ಜ್ಯಾತಿ ಮಾನವ ಪ್ರಗತಿಗೆ ಅಡ್ಡಗಲ್ಲು. ಆಚಾರ ವಿಚಾರ ಕೈಗೆ ಕೈ ಹಿಡಿಯಬೇಕು. ವ್ಯಕ್ತಿಧರ್ಮ

ಸಮಾಜಧರ್ಮಕ್ಕೆ ಆಳಾಗಬಾರದು; ಗೆಳೆಯನಂತಾಗಬೇಕು. ವ್ಯಕ್ತಿ, ಸಮಾಜ ಒಂದನ್ನೊಂದು ತುಳಿಯಲು ಹವಣಿಸಬಾರದು. ಅನ್ನೋ ಮಾತು ಗಳನ್ನೆಲ್ಲ ಆವರು........ ಅಲ್ಲ, ಉಪನ್ಯಾಸಕ್ಕೇ ನಿಂತೆನೇನೋ ಅಂತೀನಿ. ಕ್ಷಮಿಸಿರಿ.

**ಸ —** ಇಲ್ಲ, ಇಲ್ಲ. ನೀವು ಹೀಗೇ ಎಷ್ಟೊತ್ತು ಮಾತಾಡಿದರೂ ಕೇಳಬೇಕೆನಿಸುತ್ತದೆ.

**ಅಂ —** ಹುಚ್ಚಿ ಅಂತ ಮಾತ್ರ ತಿಳಕೊಳ್ಳದಿದ್ದರ ಸಾಕು. ನೀವು ವಿಪರೀತ ಏನೂ....

**ಸ —** ಛೆ, ಎಂದೂ ಇಲ್ಲ ಶಾಂತಣ್ಣನ್ನ ನೋಡ್ರಿ ಕಣ್ಣು ಮುಚ್ಚಿ ಹ್ಯಾಂಗ ಕೂತಾನ? ಮುದಕಪ್ಪಾ, ಈಗ ಹ್ಯಾಂಗೈತಿ ನೋವು?

**ಶಾಂ —** ಈಗೇನಿಲ್ರಿ ಯಪ್ಪಾ! ಏನೊ ಓಟು ಹಾಂಗ ಜಂಪು ಬಂದ್ಹಾಂಗ ಆಗಿತ್ರೀ. ಈಗ ಹಳುವಾರ ಅನಸಾಕ ಹತ್ತೈತಿ. ಇನ್ನ ಹಾಂಗ ಎದ್ದು ಹೋಕ್ಕೇನ್ರಿ. ( ಎದ್ದು ) ಯಪ್ಪಾ, ನಿಮ್ಮ ಪಾದಕ್ಕ ಬಿದ್ದೆನ್ರಿ ನಿನ ಮಗಾ. ಯವ್ವಾ, ನಿಮಗೂ ಶರಣು ಮಾಡತೇನಿ ತಾಯಿ. ದೇವರು ನಿಮ್ಮಿಬ್ಬರಿಗೂ ಕಲ್ಯಾಣ ಮಾಡ್ಲಿ. ಹೋಗಿಬರತೇನ್ರಿ. ಶಣ್ಣಾ. ಅಪ್ಪಣೆ ಕೊಡು ತಾಯಿ. ( ಸಾವಕಾಶವಾಗಿ ಹೋಗಹತ್ತುವನು )

**ಅಂ —** ( ಸರ್ವೋತ್ತಮನಿಗೆ ) ತಮ್ಮ ಹೆಸರು?

**ಸ —** ನನ್ನ ಹೆಸರು ಸರ್ವೋತ್ತಮ. ತಮ್ಮದು?

**ಅಂ —** ಅಂಜನಾ.

**ಸ —** I thank you madam. ಅಲ್ಲ, ತಮ್ಮ ಉಪಕಾರ ಬಹಳಾತು, ಈ ಒಡವಗ ಸಹಾಯ ಮಾಡಿದಕ್ಕ. ಅದೂ ಇಂಥಾ ಹೊತ್ತಿನಾಗ ಅಕಸ್ಮಾತ್ ಬಂದು.

**ಅಂ —** ಉಪಕಾರ! ಯಾತರ ಉಪಕಾರ? ಕಷ್ಟದಾಗ ಇದ್ದವರನ್ನ ನೋಡಿದರ ಸಹಾಯ ಮಾಡಬೇಕೂ ಅಂತ ಎಂಥವರಿಗೂ ಅನಸತದ. ಮಾಡಬೇಕಾದ್ದನ್ನ ಮಾಡೇನಿ ಅಷ್ಟs.

**ಶಾಂ** — (ಹೋಗುತ್ತಿರುವವ ತಿರುಗಿ ಬಂದು) ಕಲ್ಲಾ, ನಿಮ್ಮಂತಾವರು ಬಂದು ನಮ್ಮಂತಾವರನ್ನ ಮುಟ್ಟಿ, ನೀರು ತಂದು ಕೊಟ್ಟು, ಮುಕ ತೊಳೆದು....ಛೆ ಛೆ ಛೆ ಗಸಮಾತು ತಗೀರಿ. ಯವ್ವಾ ಈಟೆಲ್ಲಾ ಮಾಡಿದರೂ ಇನ್ನಾ ಏನ್ ಮಾಡೀನಿ ಅಂತೀರಿ, ಏನ್ ಹೇಳ್ತೀರಿ ?

**ಅಂ** — ಅದೆಲ್ಲ ದಿನದ ಕೆಲಸ ಶಾಂತಣ್ಣ.

**ಶಾಂ** — ಆಂ, ದಿನಾನೂ ಇದನ್ನs ಮಾಡತೀರಾ ?

[ ಅಂಜನಾ–ಸರ್ವೋತ್ತಮ ಒಬ್ಬರನೊಬ್ಬರು ನೋಡಿ ನಗುವರು ]

ಯವ್ವಾ ನನ್ ತಾಯಿ ! ಪುಣ್ಯವಂತಿ ನೀನು ! ನಿಮ್ ಊರಾವ ಯಾವದರಿ ಯವ್ವಾ ?

**ಅಂ** — ಪಂಢರಪುರ.

**ಶಾಂ** — ನಮ್ಮ ವಿಠೋಬನೂರು ! ....ಕಲ್ಯಾಣ ಆಗಲಿ

[ ಹೋಗುವನು ]

**ಸ** — ಪಂಢರಪುರ ! ಅಲ್ಲಿ ತಮ್ಮ ಮನೆಯವರು ಯಾವ ಕೆಲಸ ಮಾಡತಾರ ?

**ಅಂ** — ಮನೆಯವರು ಇನ್ನೂ ಬಂದಿಲ್ಲ.

**ಸ** — ಅಂದರ ಎಲ್ಲಿಗೆ ........ ಊರಲ್ಲಿಲ್ಲವೇನು ?

**ಅಂ** — ( ಅರ್ಥಪೂರ್ಣವಾಗಿ ನಗುವಳು )

**ಸ** — ( ಗೊಂದಲಗೆಟ್ಟು ) ಅ-ಂ-ದ-ರ ?

**ಅಂ** — ( ವಿನಯ, ಲಜ್ಜೆಯಿಂದ ಬಾಗಿ ) ನನ್ನ ಮದಿವಿ ಇನ್ನೂ ಆಗಿಲ್ಲ.

**ಸ** — ಆಂ ! ಇನ್ನೂ ತಾವು unmarried ! ಮದಿವಿ ಆಗಿಲ್ಲ !

**ಅಂ** — ನಾನಿನ್ನು ಬರತೇನಿ.

**ಸ** — Good-morning .

ಅಂ — ( ಅರ್ಘಕ್ಕೆ ಹೋದವಳು ತಿರುಗಿ, ನಸುನಕ್ಕು ) ನಮಸ್ಕಾರ.

[ ತಿರುಗಿತಿರುಗಿ ನೋಡುತ್ತ ಹೋಗುವಳು. ]

ಸ— ಕಾಲಲ್ಲಿ ಬಿದ್ದ ಈ ದಾರಿ ಏನೇನು ಅದ್ಭುತಗಳನ್ನು ತೆರೆದು ತೋರಿಸಬಹುದೊ ಏನೋ ! ನಾನು ಹಿಡಿದ ಈ ದಾರಿ ತೋರಿಸಿದ ಮೊದಲ ರತ್ನ ಇದು ! ಯಾರಿರಬಹುದು ಇವರು ?

## ಹಾಡು

ರಾಗ : ಬಿಹಾಗ ತಾಳ : ಆದಿತಾಳ

ಯಾರೀ ಬಾಲೆ ಕರುಣಾಶೀಲೆ |

ಮಿದು ಮಾತಾಡಿ ಮುದವ ನೀಡಿ
ಎದೆಯನು ಕರಗಿಸಿಬಿಡುವಳು ಕುಶಲೆ |
ಧರೆಯೊಳಿನಿತು ದಯವಿರಿದೆಂದಿಳಿದಳ
ಕರುಣಾಮೂರ್ತಿಯು ಈಗಲೆ ಶೀಲೆ ||

[ ಅದೇ ದಿಕ್ಕಿನಲ್ಲಿ ಹಾಡು ಮುಗಿದ ಹಾಗೆಯೇ ಹೊರಗಿಬಿಡುವನು ]

— —

## ದೃಶ್ಯ ೩.

[ ಬಿಚ್ಚುನಾಥನ ಆಫೀಸ್ ರೂಮು ]

[ ಬಿದ್ದಾಡಿ ಆಫೀಸಿನ ಕುರ್ಚಿಗಳ ಮೇಲಿನ ಧೂಳವನ್ನೂ ಟೇಬಲ್ಲ ಮೇಲಿದ್ದ ಸಲಕರಣೆಗಳನೆಲ್ಲ ಒರೆಸೊರಸಿ ಇಡುತ್ತಿದ್ದಾನೆ. ]

[ ತೆರೆಯಲ್ಲಿ ಸೈಕಲ್ ಬೆಲ್ ಆಗುವದು ]

[ ಬಿದ್ದಾಡಿ ಓಡಿ ಹೊರಗೆ ಹೋಗುವನು ]

[ ಬಿಚ್ಚುನಾಥ ಪ್ರವೇಶಿಸುವನು ಸಿಗರೇಟು ಸೇದುತ್ತ ]

**ಬಿ** — ( ವಿಲಾಸವಾಗಿ ಸಿಳ್ಳು ಹಾಕುತ್ತ ಬಂದು ತಲೆಯ ಮೇಲಿನ ಹ್ಯಾಟನ್ನು ಒತ್ತಟ್ಟಿಗಿಟ್ಟು ಸಿಗರೇಟು ಮತ್ತೆ ಹೊತ್ತಿಸಿ, ತನ್ನ ಕುರ್ಚಿಯ ಮೇಲೆ ಬಂದು ಕುಳಿತು ಟೇಬಲ್‌ಗಂಟೆ ಬಾರಿಸಿ ) Boy ! (ಮತ್ತೊಮ್ಮೆ ಬಾರಿಸಿ) Boy !

**ಬಿದ್ದ** — ( ಓಡಿಬರುತ್ತ ) ಸರ್‌ರ್‌ರ್ .... ( ಎಂದು ಬಂದು ಸೆಟೆದು ನಿಲ್ಲುವನು )

**ಬಿ** — ಏನು ಹಾಗೆ ಬೊಗಳಿದರೆ ? "ಸರ್‌ರ್‌ರ್" ಅಂತೆ ! ನಿನ್ನ ತಲೆ ! ಮತ್ತೆ ಹೀಗೆ ಓಡಿಬರಲಿಕ್ಕೆ ಹೇಳಿದ್ದೇನೇನು ? ಸರ್‌ರ್ ಅಂತೆ ಸರ್‌ರ್ !

**ಬಿದ್ದ** — ಮತ್ತ ನನ್ನ ಕಾಗದ್ದಾಗ ಹಾಂಗs ಬರದೈತೆಲ್ರಿ. ನೋಡ್ರಿ ಜೇಕಾರ. ( ತೋರಿಸುವನು )

**ಬಿ** — ( ನೋಡಿ ) ಬರೆದದ್ದು ಹಾಗಿದ್ದರೇನಾಯಿತು....

**ಬಿದ್ದ** — ಬರದದ್ದೊಂದು, ಅನ್ನೋದು ಇನ್ನೊಂದ ಐತೇನ್ರಿ ಹಾಗಾರ ?

**ಬಿ** — ತಡಿಯೋ ಸ್ವಲ್ಪ. ಕನ್ನಡದಾಗ ಹಾಂಗ ಬರೆದರೂ ಇಂಗ್ಲೀಷಿನಾಗ ಹಾಂಗ ಹೇಳಬಾರದು. ಸsರ್ ಅನಬೇಕು. ಅನ್ನು ನೋಡೋಣು ?

ಬಿದ್ದ — ಸಽರ್ ರ್

ಬಿ — ಹಾಂಗಲ್ಲ. ಸಽರ್.

ಬಿದ್ದ — ಸಾರ್

ಬಿ — ಥುತ್ ಕತ್ತೆ.

ಬಿದ್ದ — ಆ-ಲ-ರಾ-ಯಿಟಽ ಸಽರ್.

ಬಿ — ನಿನ್ನ ತಲೆ. ಆ:ಲ್‌ರೈಟ್ ಸಽರ್

[ ಬಿದ್ದಾಡಿ ಮತ್ತೆ ತಪ್ಪುತ್ತಾನೆ ]

ಇರಲಿ, ಇವತ್ತು ಇಷ್ಟುಽ ಸಾಕು. ಮಾಚಣ್ಣಶೆಟ್ಟರು ಬಂದರೇನು ?

ಬಿದ್ದ — ನೀವಽ ಹೇಳಿದಿರಲ್ರಿ ಆ ಆಚಾರ್ನ ಕರಕೊಂಡು ಬಾ ಅಂತ ಹೇಳೂಅಂತ ನನಗ. ಅದನ್ನ ಅವಗ ಹೇಳಿದಿನ್ರಿ. ಹೇಳಟಿಗೆ ಆವರನ್ನ ಕರಕೊಂಡುಬರಾಕ ಅವ ಆತ್ತಾಗ ಹೋಗಿಬಿಟ್ಟನ್ರಿ; ನಾ ಇತ್ತಾಗ ಬಂದಬಿಟ್ಟೆನ್ರಿ. ಈಗ ಬಂದಾರ್ರಿ.

ಬಿ — ಆಯಿತು. ಹೊರಗಿರು. ಆವರು ಬಂದಕೂಡಲೆ ಒಳಗ ಕಳಿಸಿ ಬಿಡು.

ಬಿದ್ದ — ಆ:ಲ್‌ರಾಯಿಟ್ ಸಽರ್. ಬರಾಬ್ಬರಿ ಐತಿಲ್ರಿ ?

[ ಹೋಗುತ್ತಾನೆ ]

ಬಿ — (ಕುರ್ಚಿಯಿಂದ ಎದ್ದು ಸಿಳ್ಳು ಹಾಕುತ್ತ ಅತ್ತಿತ್ತ ತಿರುಗಾಡುತ್ತ ಸಿಗರೇಟು ಹೊತ್ತಿಸಿ ಹೊಗೆ ಬಿಡುತ್ತ ) ಅಂತೂ ನಮ್ಮ ಬಸ್ತಾನ ಕೂತಂಗ್ಹಾಯಿತು. ಜನರ ಮನಸಿನ ಮ್ಯಾಲಂತೂ ನಮ್ಮ ಶ್ರೀಮಂತಿಕಿ ಠೀವು, ಛಲೋ ಛಾಪು ಹಾಕೇದ. ನಮ್ಮ ಕಾಲೇಜಿನ ಪ್ರಚಾರಾನೂ ಸಾಕಷ್ಟು ಜೋರಿನಿಂದ ಸಾಗೇದ. ನನ್ನ ಈ ಶ್ರೀಮಂತಿಕಿ ಆಮಿಷಕ್ಕ ಎಷ್ಟೋ ಮೀನ ಆಗಳಿಬಿದ್ದಾವ. ನೋಡಬೇಕು ಇನ್ನ ಮುಂದೆ ಎಲ್ಲೆಲ್ಲಿಗೆ ಬರತದೋ ಸುರುವುವಾಗಿದ ಈ ನಾಟಕ ! •

( ಕುರ್ಚಿಯ ಮೇಲೆ ಕುಳಿತು ಬರೆಯತೊಡಗುವನು )

[ ತೆರೆಯಲ್ಲಿ ]

**ಮಾ** — ಏ, ಬಿದ್ದಾಡಿ, ನಿಮ್ಮ ರಾಯರಿಗೋಟು ತಿಳಿಸು, ನಾನೂ ಮತ್ತು ಚಿನ್ಮಿದ್ಧಣ್ಣಾಚಾರು ಇಬ್ಬರೂ ಬಂದೀವಿ ಅಂತ. ಒಳಗ ಬಾ ಅಂತಾರೇನೊ ಕೇಳಿಕೊಂಡು ಬಾ ಹೋಗು.

**ಬಿದ್ದ** — ಅವರೂ ನಿಮ್ಮ ದಾರೀನs ನೋಡಾಕ ಹತ್ಯಾರು ಬರ್‍ರಿ. ಹಂs, ಬರ್‍ರಿ ಅಂದಗಳಿಗ್ಗೆ ಹಾಗs ಬರಬ್ಯಾಡ್ರಿ, ನಿಂದರ್‍ರಿ. ಒಳಗ ಹೋಗಿ ತಿಳಿಸಿ ಬರ್‍ತೇನು, ಸಾಹೇಬರಿಗೆ.

**ಮಾ** — ಹೌದಲ್ಲs ಸಾಹೇಬಿಕೀ ಶಿಸ್ತಿನ ಮಂದಿ. ಹಾಗs ಆಗಲಿ, ಹೋಗಿ ಬಾ.

[ ರಂಗದ ಮೇಲೆ ಬಿದ್ದಾಡಿ ಬರುವನು ]

**ಬಿದ್ದ** — ಸರ್, ಮಾಚಣ್ಣಶೆಟ್ರು, ಆಚಾರಭಟ್ರು ಬಂದು ಹೊರಗ ನಿಂತಾರ್‍ರಿ. ಒಳಗ ಬರಾಕ ತಮ್ಮ ಪರವಾನಿಗಿ ಕೇಳತಾರು.

**ಬಿ** — ಅಚ್ಛಾ, ಜಲ್ದಿ ಬುಲಾವ್.

**ಬಿದ್ದ**— ಆಲ್ ರೈಯಿಟ್ ಸರ್.

[ ಹೋಗಿ ಇಬ್ಬರನ್ನೂ ಕರೆತರುತ್ತಾನೆ ]

**ಬಿ** — ( ನಯವಿನಯಗಳಿಂದ )ದಯಮಾಡಿಸಬೇಕು, ದಯಮಾಡಿಸಬೇಕು ಆಚಾರ್ಯರು; ಹೀಗೆ ಬರಬೇಕು ಶೆಟ್ಟರು. ಇತ್ತ ಬನ್ನಿರಿ, ಕುರ್ಚಿಗಳ ಮೇಲೆ ಕುಳಿತುಕೊಳ್ಳಿ. (ಶೆಟ್ಟರು ಕುಳಿತುಕೊಳ್ಳುವರು. ಇನ್ನೂ ಹಾಗೇ ನಿಂತಿರುವ ಆಚಾರ್ಯರನ್ನು ನೋಡಿ ) ಹಃ ಹಃ ಹಃ ಆಚಾರ್ಯರಿಗೇನೂ ತೊಂದರೆಯಿಲ್ಲ ಅವರ ಶೀಲಕ್ಕೆ. ಕುರ್ಚಿ ಕಟ್ಟಿಗೆಯವು. Bad conductorಉ. ಮಡಿಗೆ ಬಂದಾವು. ತಾವು ಕೂಡಲಿಕ್ಕೆ ಅಡ್ಡಿ ಇಲ್ಲವಲ್ಲ ? ಯಾಕಂದರೆ ನೀವು ಹಳೇ ಜನ. ಧರ್ಮದಲ್ಲಿ ವಿಶ್ವಾಸವಿಟ್ಟವರು. ನಾವೋ ಹೊಸ ಜನ. ಆ ವಿಶ್ವಾಸವನ್ನೆಲ್ಲಾ ಕಳೆದುಕೊಂಡವರು.

**ಚಿ** — ಓಹೋ, ಹೌದು ಹೌದು. ಏ ಏ ಏನೂ ಅಡ್ಡಿ ಇಲ್ಲಾ. ಅದು ಶಾಸ್ತ್ರಸಮ್ಮತನs ಅದ. ನಾವು ದಿನಂಪ್ರತಿ ಮಾಡುವಂಥಾ ಸಂಧ್ಯಾವಂದನೀ ಒಳಗ "ಪವಿತ್ರಂ ಕುರುಚಾಸನಂ" ಅಂತ ಹೇಳೇ ಹೇಳೇದ. ಏವಂಚ, ಆಸನಸ್ಥರಾಗಲಿಕ್ಕೆ ಪ್ರತಿರೋಧಂ ನಾಸ್ತಿ. (ಕುರ್ಚಿಯ ಮೇಲೆ ಕೂಡುವರು)

**ಮಾ** — ಸಾಹೇಬರ, ನಾ ನಿಮುಗ ಹೇಳತಿದ್ನಲ್ಲಾ ಅದs ಆಸಾಮಿ ನೋಡ್ರಿ ಇವರು. ಹೆಸರು ಚಿನ್ನಮುದ್ದಣ್ಣಾಚಾರು. ನಿಮುಗ ಏನು ಬೇಕು ಅದನ್ನ ತಂದುಕೊಡತಾರ. ಎಂಥಾ ಹೆಣ್ಣಂದರ ಅಂಥಾ ಹೆಣ್ಣು ತಂದು ನಿಮುಗ ಗಂಟುಹಾಕ್ತಾರ. ಆದರ ಹೆಸರಿಗೆ ತಕ್ಕ್ಯಾಂಗ ಕೈ 'ಓಟು' ಮುಂದs ಚಾಚಿತಿರತೈತಿ. ಆ ಚಾಚಿದ ಕೈಯಾಗ ಏನ ಬೀಳತೈತ್ರೊ ಅದರ ಮ್ಯಾಗಿಂದ ನೋಡ್ರಿ, ಕೆಲಸ ಆಗೂದು ಬಿಡೂದು.

**ಬಿ** -- ಓಹೋ ! ಎಂಥಾ ಮಾತು ಶೆಟ್ಟರೇ ! ನನ್ನ ಈ ಅಂತಸ್ತಿಗೆ ತಕ್ಕಂಗ ಭರ್ಜರಿ ಬೀಗತನ ಹೊಂದಿಸಿ ಕೊಡಲಿ, ಅವರು ಏನು ಬೇಡತಾರೋ ಅದು.ಆಗಿಹೋಗಲಿ.

**ಮಾ** — ಸರಿ ಹಾಗಾರ. ಮಾತು ಒಪ್ಪಿತs ಆಚಾರೆಪ್ಪನವರ ? ವ್ಯಾಪಾರ ಸರಳ ಇರಬೇಕು ನೋಡ್ರಿ. ಕೇಳಿದರಿಲ್ಲೆ? ರೊಕ್ಕಕ್ಕೇನು ಹೈಗೈ ಇಲ್ಲ. ಅಂದಮ್ಯಾಗ ಯಾಕ ಕಾಳಜಿ ? ಆಚಾರs, ಹೆಣ್ಣು ಹ್ಯಾಗಿರ ಬೇಕಂದ್ರಿ—ಓಣ್ಯಾಗ ಹೊಕ್ಕಿದ್ರ, ಎಂಥವನೂ ಒಂದೀಟು ಹೊಳ್ಳಿ ನೋಡಿರ ಬೇಕು. ಝುಮುರು ಝುಮುರು ಇರಬೇಕು. ಹಃ ಹಃ ಹಃ ಅದೇನು ಬಿಡ್ರಿ ನಿಮ್ಮ ಕೈಯಾಗs ಐತಿ. (ಸಾಹೇಬರಿಗೆ) ಆತು ಹಾಗಾರ, ನಮ್ಮ ಕೆಲಸ ಆದ್ಹಾಗಾತು. ಇನ್ನ ನೀವೂ ನೀವೂ ಮಾತಾಡಿಕೊಂಡುಬಿಡ್ರಿ. ವ್ಯಾಪಾರ ಸರಳ ಇರಬೇಕು ನೋಡ್ರಿ. (ಎದ್ದು ಹೊರಡುವನು)

**ಬಿ** — (ತಡೆದು) ಛೆ ಛೆ ಶೆಟ್ಟರೆ, ತಾವೂ ಇರಬೇಕು, ತಡೀರಿ. ಹೀಂಗ ನಡಂತರಕೀಲೆ ಕೈಬಿಟ್ಟು ಹೋದರ ಹ್ಯಾಂಗ ?

**ಮಾ** — ಛೇ ಛೇ, ಹಾಗಲ್ಲರಿ ನಾ ಅಂದದ್ದು. ನಾಯೇನು ಅತ್ತಾಗs ಹೋಕ್ಕೇನಿ ಅಂತ ಅಲ್ಲ. ಇದ್ದs ಇರತೀನಿ. ಇದಿರಿಗೇ ಇದ್ದರ

ಮಾತಾಡಿಕೊಣ್ಣಾಕ ಒಂದೀಟು ಎದಿಗುಕಶ್ಕಕ್ಕೈತಿ ಅಂತ. ನಿಮ್ಮ ನಿಮ್ಮ ಮಾತು ನಡೀಲಿ ( ಮತ್ತೆ ಬಂದು ಕೂಡುವನು )

ಬಿ — ಆಚಾರ್ಯಸ್ವಾಮಿಗಳವರಿಗೆ ಏನಾದರೂ ಸಿಗಾರೇಟ್, ಬೀಡಿ, ತಂಬಾಕ, ನಸ್ಯ ?

ಚಿ — ಛಿ ಛಿ ಛಿ ಶಾಂತಂ ಪಾಪಂ !

ಬಿ — ಹಾಗಾದರೆ ಸೋಡಾ, ಚಹಾ, ಕಾಫಿ ?

ಚಿ — ಇಂಥಲ್ಲೆ ? ಛೆ ಛೆ ಬ್ಯಾಡ. ಬ್ರಾಹ್ಮಣ್ಯ ಒಂದದಲ್ಲ ಖೋಡಿ.

ಬಿ — ಶೆಟ್ಟರೇ ತಮಗ ?

ಮಾ — ಹಃ ಹಃ ಹಃ ನಮಗೇನು ? ಬೀಡಿಯೇನು, ಚಿರೂಟೇನು, ಸಿಗರೇಟೇನು. ಆತು, ಸಿಗರೇಟs ತತರ್ರಿ. [ ಬಿಚ್ಚುನಾಥ ಸಿಗರೇಟಿನ ಡಬ್ಬಿಯು ಬಾಯಿ ತೆರೆದು ಅವನೆದುರಿಗೆ ಹಿಡಿಯುವನು. ಶೆಟ್ಟಿ ಅದರೊಳಗಿಂದ ಒಂದನ್ನು ಏಳೆದು ಸೆದುವನು. ]

ಬಿ — ಆಚಾರ್ಯರು ತಮ್ಮ ಸಂಭಾವನೆಯು ಬಗ್ಗೆ ಯಳ್ಳಷ್ಟೂ ಚಿಂತಿಸುವ ಕಾರಣವಿಲ್ಲ. ಆದರೆ ಆಚಾರ್ಯಸ್ವಾಮಿ, ಹುಡಿಗಿ ಮಾತ್ರ ಕಲ್ತಿದ್ದಿರಬೇಕು. ನೋಡ್ರಿ. ಅಂದರs ಒಂದಷ್ಟು ಈಗಿನ ಜಗತ್ತಿನ ಜ್ಞಾನ ಇರತದ; ಈಗಿನ " ಫ್ಯಾಶನ್ನೂ " ಗೊತ್ತಿರತಾವ.

ಮಾ — ಆಚಾರs ಹತ್ತು ಸುಳ್ಳು ಹೇಳಿ ಒಂದು ಕಲ್ಯಾಣಕಟ್ಟಬೇಕಂತ. ಗಡಾನ ಒಂದು ಹುಡಿಗಿನ್ನ ತಂದು ನಮ್ಮ ಸಾಹೇಬರಿಗೆ ಮದಿವಿ ಮಾಡಿಸಿಬಿಡ್ರಿ.

ಬಿ — ಆಚಾರ್ಯಸ್ವಾಮಿ, ತಾವು ಹಳಬರು, ಮತ್ತ " ಅಷ್ಟವರ್ಷಾ ಭವೇತ್ ಕನ್ಯಾ " ಅಂತ ತಿಳಕೊಂಡು ಒಂದು ಚಂದನದ ಗೊಂಬೀ ತಂದೀರಿ ಮತ್ತ. ಹಃ ಹಃ ಹಃ ಹುಡಿಗಿ ದೊಡ್ಡದಿರಬೇಕು.

ಚಿ — ಹಾಂಗ ಹ್ಯಾಂಗ ಆದೀತು. ಷೋಡಶ ವರ್ಷದ ಕನ್ಯಾ ತಂದು ಮದಿವಿ ಮಾಡತೇನಿ ಬಿಡ್ರಿ.

ಬಿ — ಅಡ್ಡಿ ಇಲ್ಲ.

ಚಿ — ಆದರ............

ಮಾ — ಮತ್ಯಾಕ ಅನುಮಾನ ಮಾಡತೀರಿ ಆಚಾರ ?

ಚಿ — ಏ ಏನಿಲ್ಲ. ಆದರ.... ಸಂಭಾವನಾ.... ಎಷ್ಟು.... ಅಂತ ತಿಳಿದಿದ್ದರ........

ಮಾ — ಹಃ ಹಃ ಹಃ ಆದೇನು, ನೀವು ತರೋ ಕನ್ಯದ ಮ್ಯಾಗ ಅವಲಂಬಿಸೇತಿ. ಅಲ್ಲೇನ್ರಿ ಸಾಹೇಬ್ರ ? ಹಃ ಹಃ ಹಃ ಯಾಕಂದ್ರ ವ್ಯಾಪಾರ ಸರಳ ಇರಬೇಕು ನೋಡ್ರಿ.

ಚಿ — ಆದೇನು ಸ್ವತಃಸಿದ್ಧವೇ ಅದೆ. ಆದರೂ.... (ಸಾಹೇಬರ ಕಡೆಗೆ ತಿರುಗಿ) ಏನೋ "ಸರ್ವಾರಂಭಾಸ್ಥಂಡಿಲಃ ಪ್ರಸ್ಥಮೂಲಾಃ" ಅಂತ (ನಗುತ್ತ) ಸ್ವಲ್ಪ ಮೊದಲಿಗೇ ಗೊತ್ತಾಗಿದ್ದರ ನೆಟ್ಟಗಿತ್ತು........ ಆಗಲಿ ನೋಡೋಣ. ಬರತೇನಿ ಇನ್ನ.

ಬಿ — ಆಚಾರ್ಯಸ್ವಾಮಿ, ಸ್ವಲ್ಪ ತಡೀರಲ್ಲ. ಇಷ್ಟ್ಯಾಕ ಅವಸರ ಮಾಡತೀರಿ ಹೊರಡಲಿಕ್ಕೆ ? ಇಲ್ಲಿ ಬರ್ರಿ, ಇಲ್ಲಿ ಕೂತುಕೊ ಬರ್ರಿ. ಹಾಂಗ ನಿಮಗ ಅನುಮಾನ ಇದ್ದರ ಇಕಾ (ಹತ್ತು ರೂಪಾಯಿನೋಟು ಮುಂದ ಮಾಡುತ್ತ) ಇದು ವಿಘ್ನೇಶ್ವರನ ಪೂಜಾದ ದಕ್ಷಿಣಿ....ಅನುಮಾನ ಯಾಕ ಮಾಡತೀರಿ ? ಹಿಡೀರಿ.

ಮಾ — ಆಚಾರರು ಇದು ಇನ್ನೂ ಬರೇ ಸಂಚಗಾರ. ಊಟs ಅಂತ ತಿಳಿಬ್ಯಾಡ್ರಿ. ಇನ್ನೂ ಮುಂದೈತಿ ಮತ್ತ.

ಚಿ — (ಮೆಲ್ಲಗೆ ಕೈಯೊಡ್ಡುತ್ತ) ಏ ಏ ಏನಡ್ಡಿ ಇಲ್ಲ ಇರಲಿ. ಇರಲಿ ಹಃ ಹಃ ಹಃ ತಮ್ಮ ಹತ್ತಿರ ಇದ್ದರ ಎಲ್ಲಿ ಹೋಗತದ ? (ನೋಟನ್ನು ತೆಗೆದುಕೊಂಡು) ತಮ್ಮ ಹತ್ತರ ಇದ್ದರೂ ಒಂದs, ನಮ್ಮ ಹತ್ತರ ಇದ್ದರೂ ಒಂದs.

ಮಾ — ಆಚಾರರು ಈಳ್ಯ ಎತ್ತಿದ್ಹಾಂಗ ಆತು ನೋಡ್ರಿ. ಹಾಂ, ಇಲ್ಲಿ ಓಟು ತಡೀರಿ. ಒಳೇ ನೆಪ್ಪಾತು. ಇವತ್ತು ಮದ್ಯಾಣದಾಗ ಒಂದು ಹುಡಿಗಿನ್ನ ನೋಡಿದೆ. ನಮ್ಮೂರಿಗೆ ಒಂದೀಟು ಹೊಸಾದು ಕಾಣತೈತಿ.

ಅಲಲಲ! ಏನ್ ಹುಡಿಗಿ ಅಂದ್ರಿ! ಚಕ್‌ಪಕ್ ಮಿಂಚು ಇದ್ದಾಂಗ ಇದ್ಲು ನೋಡ್ರಿ. ಏನ್ ಫ್ಯಾಶನ್ನು! ಏನ್ ಆ ನಡಿಗಿ! ಮುಂಗಾರಿ ಮಳಿಗೆ ನವಿಲು ಕುಣಿದ್ಹಾಂಗ ಇತ್ತು ನೋಡ್ರಿ! ವ್ಹಾ! ಹೆಣ್ಣು ಅನಬೇಕು ಅದಕs. ಅದು ಒಂದು ವ್ಯಾಳ್ಯಾಕ ನಮ್ಮ ಈ ಸಾಹೇಬರಿಗೆ ಸಿಕ್ಕರ, ಕಬ್ಬಿನ ಮ್ಯಾಗ ಜೇನಿಟ್ಹಾಂಗಾದೀತು, ಅಂತೀನಿ. ಹ್ಯಾಗ, ನೀವೇನಂತೀರಿ?

**ಚಿ** — (ಅನುಮಾನಿಸಿ) ನೋಡಬೇಕು ವಿಚಾರಿಸಿ. ಆದರ ಅದಕೆಲ್ಲಾ ಶೆಟ್ಟರ, ಸಂಭಾವನಾ ಇಷ್ಟೂ ಅಂತ ಗೊತ್ತಾಗಿದ್ದರ ಮುಂದ್ಹರಿದು ಕೆಲಸಾ ಮಾಡ್ಲಿಕ್ಕೆ ಹುರುಪು ಬರತದೇನ್ರೆಪಾ. ಇರಲಿ, ಆದರೂ ನೋಡೋಣು ಪ್ರಯತ್ನ ಮಾಡಿ.

**ಮಾ** — ಯಾಕ್ರೀ ಆಚಾರs? ಎಲ್ಲಾನೂ ತಲಿ ಕೆರಿಸೇ ಮಾತಾಡಾಕ ಹತ್ತೀರಲ್ಲ! ಅನಮಾನ ಅನುಮಾನ! ಪ್ರಯತ್ನ-ಗಿಯತ್ನ ಅದೆಲ್ಲ ಸುಳ್ಳು ನೋಡ್ರಿ. ಈಳ್ಯ ಎತ್ತೀರಿ ಅಂದಮ್ಯಾಗ ಕೆಲಸಾ ಹೊಡದು ಹಾಕಾಕಬೇಕು. ಯ್ಯಾಪಾರ ಸರಳ ಇರಬೇಕು ನೋಡ್ರಿ. ಏನ್ ಇದ್ದೆಲ್ಲಾ ಖಟಪಿಟ-ಲಟಪಿಟಿ ಮಾಡಿ ಆ ಹುಡಿಗಿನ್ನ ಗಂಟುಹಾಕಬೇಕು ನೋಡ್ರಿ.

**ಚಿ** — ಹಃ ಹಃ ಹಃ ಗಂಟು ಹಾಕೇನು ಬಿಡ್ರಿ, ಆದರಾಗೇನು. ಆದರ ಶೆಟ್ಟರ, ನೀವು ಎಲ್ಲಿ ನೋಡಿದಿರಿ ಆ ಕನ್ಯಾನ್ನ?

**ಮಾ** — ನಾನ್ರೇ? ಇಂದ ಮದ್ಯಾಣದಾಗ ಮಟಕ್ಕ ಹೊಂಟಾಗ ಒಬ್ಬ ಹಾರೂರ ಹುಡುಗ ಒಬ್ಬ ಹೊಲೆದಾಸನ ತಲಿ ಹಿಡಕೊಂಡು ಕುಂತಿದ್ದ. ಅವನ ಹಣಿಯಿಂದ ಮೂಗಿನಿಂದ ಒಂದs ಸವನ ರಕ್ತ ಸುರೀತಿತ್ತು. ಹಾರೂರ ಹುಡುಗ ನನ್ನ ನೋಡಿ ಶಿವಪೂಜೆಗೆ ಒಯ್ಯೊ ಚೆರಿಗ್ಯಾಗಿನ ನೀರು ಕೇಳಿದ. ಹ್ಯಾಗ ಕೊಡೋದು ಹೇಳ್ರಿ? ಹಾಗs ಹೊರಟು ಬಂದುಬಿಟ್ಟೆ. ನಾನೂ ಎರಡು ಹೆಜ್ಜಿ ಮುಂದ ಬರಾಕ, ಆ ಹುಡಿಗಿ ನನ್ನೆದಿರಿಗಿಂದನs ಹಾದು ಅತ್ತಾಗ ಹೋದ್ಲು. ಆ ಥಕ್‌ಪಕ್ ನಡಿಗಿ, ಆ ಚಮಕು, ನೋಡಿ ನನ್ನಂತಾ ನಾನು ದಂಗುಬಡದು ನಿಂತೆ. ನೆಟ್ಟಗ ಆ ಹಾರೂರ ಹುಡುಗನ ಹಂತ್ಯಾಕ ಏನೇನೋ "ಎಸ್‌ಪಿಸ್" "ಎಸ್‌ಪಿಸ್" ಮಾತಾಡಾಕ ಹತ್ತಿದ್ಲು.

ತನ್ನಕೈವಸ್ತ್ರ ಅವನ ಕೈಯಾಗ ಕೊಟ್ಲು. ಛಿ ಛಿ ಛೀ ಘನ ಮಾತರಿ ಅದು! ಗಂಡಸರ ಹೆದರಿಕಿ ಅನ್ನೋದು ಒಂದೀಟೂ ಇಲ್ಲ ತಗೀರಿ!

ಬಿ — ನೋಡ್ರಿ ಆಚಾರ್ಯಸ್ವಾಮಿ, ಶೆಟ್ಟರು ಹೇಳತಾರಲ್ಲ, ಈ ಹುಡಿಗಿನ್ನೇನಾರ ಗೊತ್ತುಮಾಡಿಸಿಕೊಡತೀರೇನು ?

ಚಿ — ನೋಡೋಣ, "ಯತ್ನೇ ಕೃತೆ ಯದಿ ನ ಸಿಧ್ಯತಿ ಕೋಽತ್ರ ದೋಷಃ". ಆದರ.... ....

ಬಿ — ಅನುಮಾನ ಇಟ್ಟುಕೋಬೇಡ್ರಿ. ಸಂಭಾವನಾ ಮರ್ಯಾದಿಗೆ ತಕ್ಕಂಗ ಆಗೇ ಆಗ್ತದ.

ಮಾ — ಎಲಾ ನಿಮು ! ಏನ್ ಮಿಜಿಮಿಜಿ ಮಂದ್ರೀ ನೀವು ! ನಜರು ಮುಂಗೋಲು ಇಟ್ಟು ಹೊಡದರ ಜಗ್ಗಿದಽಟು ಬೆನ್ನು ಹತ್ತಿ ಬರತೈತಿ.

ಚಿ — ಅದೆಲ್ಲಾ ಖರೆ ಶೆಟ್ಟರ; ಆದರ ಆ ಹುಡಿಗೀ ಮದಿವಿ ಆಗಿದ್ದರ ಹ್ಯಾಂಗ ಅಂತ!

ಮಾ — ಅದಕ್ಕೆಲ್ಲಾ ಸಾಹೇಬರೇನು ಹೇಳಬೇಕು ? ಮದಿವಿ ಆಗಿದ್ದರ ಬಿಡಿಸಿ ತರಬೇಕು. ಅಂದರಽ ನಿಮ್ಮ ಕರಾಮತಿ. ಅದನ್ನ ಅವರನೇನು ಕೇಳತೀರಿ ? ಒಟ್ಟಿನ ವ್ಯಾಗ ಅವರು ಬೇಡಿದ ಹುಡಿಗೀ ಅವರಿಗೆ ಗಂಟು ಹಾಕಿದರಾಯಿತು.

ಚಿ — ಅದು ಹ್ಯಾಂಗ ಸಾಧ್ಯ ಶೆಟ್ಟರಽ? ಅದಕ್ಕ ಸಾಹೇಬರಾರಽ ಹ್ಯಾಂಗ ಒಪ್ಪ್ಯಾರು ? ಮತ್ತ ಅಂಥಾ ಕೆಲಸಾ ಮಾಡ್ಲಿಕ್ಕೆ ನಾಯೇನು ಕುಂಟಣಿಗನಽ ?

ಬಿ — ನಮ್ಮ ಹೊಸ ವಿಚಾರದ ಮಂದಿಗೆ ಇವ್ಯಾವೂ ಅಡ್ಡ ಬರೂದಿಲ್ಲ ಆಚಾರ್ಯಸ್ವಾಮಿ! ಅಲ್ಲಾ ಏನೋ ಅಂದಿರಲ್ಲ, ಕುಂಟಣಿಗಾ ಅಂತ. ಅಲ್ಲಾ ಸಂಭಾವನಾದ ಹೆಸರಿನಿಂದ ಪಲಾಲಿ ತಗೊಂಡು ಹೆಣ್ಣೂ ಗಂಡೂ ಗಂಟುಹಾಕಲಿಕ್ಕೆ ಬರ್ತದ. ಅದು ಕುಂಟಲತನ ಅಲ್ಲ. ಇದು ಮಾತ್ರ ಕುಂಟಲತನಾನಽ ? ಆಚಾರ್ಯಸ್ವಾಮಿ, ಸಿಟ್ಟಿಗೇಳಬ್ಯಾಡ್ರಿ, ಕೂತುಗೊಳ್ಳಿರಿ.

ಇದೊಂದು ವ್ಯಾಪಾರ ಅಂತ ಮಾಡಿದವ್ಯಾಲ, ಮಾತಿಗ್ಯಾಕಿಷ್ಟು ಆಳಕ ಬೇಕು ? ಯಾಕ್ರಿ ಶೆಟ್ಟರs ?

**ಮಾ** — ಹೌದು ಬಿಡ್ರಿ, ಯ್ಯಾಪಾರ ಸರಳ ಇರಬೇಕು ಸೈ.

**ಚಿ** — ಏ ಏ ಏನಿದು ! ಎಲ್ಲಾ ಅಬ್ರಹ್ಮಣ್ಯ ! ಭ್ರಷ್ಟಾಕಾರ ! ಈ ನಿಮ್ಮ ಸಂಭಾವನಾ ದಲಾಲೀನs ! ನನ್ನ ಯಾನ ನರಕಕ್ಕ ಕಳಿಸಬೇಕೂ ಅಂತ ಮಾಡೀರಿ ? ಈ ನಿಮ್ಮ ದಲಾಲೀನೂ ಬ್ಯಾಡ, ನಿಮ್ಮ ಈ ವ್ಯಾಪಾರಾನೂ ಬ್ಯಾಡ. ತಗೊಳ್ರಿ ನಿಮ್ಮ ಈ ನೋಟು. (ಬಿಚ್ಚುನಾಥನ ಮುಖದ ಮೇಲೆ ಎಸೆದು ಹೊರಡಲುದ್ಯುಕ್ತನಾಗುವನು )

**ಬಿ** — ( ಎದ್ದು ಬಂದು, ಕೈ ಹಿಡಿದು ತಡೆದು, ಕುರ್ಚಿಯ ಮೇಲೆ ಕುಳ್ಳಿರಿಸುತ್ತ ) ಹಾಂಗಲ್ಲ, ಆಚಾರ್ರs. ನಾ ಅಂದದ್ದನ್ನ ನೀವು ತಪ್ಪು ತಿಳಕೊಂಡಿರಿ. ನಾ ನಿಮ್ಮ ಬ್ರಾಹ್ಮಣ್ಯಕ್ಕ ಬೈಯ್ಯಲಿಲ್ಲ. ನಿಮ್ಮನ್ನ ತೆಗಳಲಿಲ್ಲ. ಏನೋ, ಸುಮ್ಮನೆ ಮಾತಿಗೆ ಮಾತು ಅಂತ ಆಡಿದೆ. ಅಷ್ಟಕ್ಕs ನೀವು ದೂರ್ವಾಸನ್ಹಾಂಗ ಅಪಮಾನದಾನs ತಾಳಿಬಿಡಬೇಕೇನು ? ಹೋಗಲಿ ಬಿಡ್ರಿ ಅದೆಲ್ಲ. ಆ ಹುಡಗೀ ಮದಿವಿ ಆಗಿರದಿದ್ದರ ಪ್ರಯತ್ನ ಮಾಡತೀರೋ ಇಲ್ಲೋ ಹೇಳ್ರಿ ?

**ಚಿ** — ಹಂ, ಇನ್ನೂ ಹಾಂಗ ಅನ್ನರಿ, ಅಡ್ಡಿ ಇಲ್ಲ. ( ನೋಟನ್ನು ಬಗ್ಗಿ ತಗೆದುಕೊಳ್ಳುತ್ತ ) ನನ್ನ ಕೈಲಿಂದಾದಷ್ಟು ಯತ್ನ ಮಾಡತೀನಿ.

[ ಬಿದ್ದಾಡಿ ಬಂದು ಬಿಚ್ಚುನಾಥನ ಕೈಯಲ್ಲಿ ಚೀಟಿ ಕೊಟ್ಟು ಅಪ್ಪಣೆ ಪಡೆದು ಕೊಂಡು ಹೋಗುವನು ]

**ಚಿ** — ಅಲ್ಲ, ಇನ್ನ ನಮಗ ಅಪ್ಪಣಿ ಕೊಡ್ರಿ. ಯಾರೋ ಬಂದಾರ; ಬಹಳ ಕೆಲಸ ಕಾಣಸ್ತದ. ಹೋಗಿಬರತೇವಿ.

**ಬಿ** — ಏನೂ ಅಡ್ಡೀ ಇಲ್ಲ. ಯಾರು ಬಂದರೇನು? ಕೂತುಕೊಳ್ರಿ. ಅಷ್ಟೇನು ಅವಸರ ?

[ಬಿದ್ದಾಡಿ ಕನಕರಾಯರನ್ನು ಕರೆದುಕೊಂಡು ಬರುವನು ]

**ಬಿ** — ಬರಬೇಕು ಬರಬೇಕು. ಕುತುಕೊಳ್ಳೋಣಾಗಬೇಕು.

**ಕ** — (ಆಚಾರ್ಯರನ್ನು ನೋಡಿ) ಏನು ಆಚಾರ್ಯರು ! ತಮ್ಮದೇನು ಕೆಲಸ ಇಲ್ಲಿ ?

**ಚಿ** — ( ನೋಟನ್ನು ಟೊಂಕಕ್ಕೆ ಸೇರಸಿ, ಗಾಬರಿಯಿಂದ ) ಏ-ಏ-ನೂ ಇಲ್ಲ. ಏ-ನೊ ಸಹಜ ಬಂದಿದ್ದೆ.... ಸಾಹೇಬರುಕರೆಸಿದ್ದರು.... ( ದೇಶಾವರಿ ನಗುವನು )

**ಕ** — ( ಕೂಡುತ್ತ ) ನನ್ನಿಂದ ತಮ್ಮ ಮಾತು ಕಥೆಗೆ ಆತಂಕವಾಯಿತೇನೋ.

**ಚಿ** — ಹಾಗೇನೂ ತಾವು ಭಾವಿಸಬಾರದು. ಅಂತಹ ಮಹತ್ವದ ಮಾತೂ ಏನಿಲ್ಲ. ಈ ನಮ್ಮ ಶೆಟ್ಟರು ಏನೋ ಹೇಳತಿದ್ದರು, ಕೇಳತಾ ಕೂತಿದ್ದೆವು.

**ಕ** — ಸರಿ. ಸರಿ.

**ಮಾ** — " ಏನೋ " ಏನು ರಾಯರ, ಧರ್ಮ ಅನ್ನೋದು ಒಂದೀಟು ಉಳೀಲಿಲ್ಲ ಈಗಿನ ಕಾಲ್ದಾಗ ಅಂತ ನಡೆದಿತ್ರಿ ಮಾತು.

**ಕ** — ಹೌದು ಹೌದು.

**ಮಾ** — ನಮ್ಮಂತ ಶೀಲವಂತರು ಇನ್ನ ಇರಬಾದ್ರೀ, ಇಂತಾ ಕಲಬೆರಕಿ ನೋಡಾಕ. ಇವತ್ತ ಮುದ್ಯಾಣದಾಗ ನೋಡ್ರಿ ರಾಯರ, ಜಳಕಾ ಮಾಡಿ ಶಿವಪೂಜಿಗೆ ಹೊಂಟಿದ್ದೆ....

**ಚಿ** — ( ಆಚಾರ್ಯರು ತಡೆಯು ಯತ್ನಿಸುವರು )

**ಮಾ** — ಆಗ ನೋಡ್ರಿ, ಒಬ್ಬ ಹಾರೂರ ಹುಡುಗ, ಒಬ್ಬ ಹೊಲೆದಾಸನ ತಲೀ ಹಿಡಕೊಂಡು ಕುಂತಿದ್ದ. ಒಂದು ಹುಡಿಗಿ ಅತ್ತಾಗಿಂದ ಬಂದು, ಗಂಡಸರು ಅನ್ನೋಹಾಂಗಿಲ್ಲ – ರಸ್ತೆ ಅನ್ನೋಹಾಂಗಿಲ್ಲ – ಹೆದರಿಕಿ–ಪದರಕಿ ನಾಚಿಕಿ–ಗೀಚಿಕಿ ಕೇಳಬ್ಯಾಡ ನೋಡ್ರಿ – ಹಾಗs ಅವನ ಕೂಟ ಪಿಸ್ ಪಿಸ್ ನಕ್ಕೊಂತ ಆ ಹೊಲೆದಾಸನ್ನ ಮುಟ್ಟಿಬಿಟ್ಟಳ್ರೀ ! ಏನುಳೀತು ಹೇಳ್ರಿ ಧರ್ಮದಾಗ.... ?

**ಚಿ** — ( ಶೆಟ್ಟರನ್ನು ಚಿವುಟುವನು )

ಮಾ — (ಲಕ್ಷ್ಯ ಕೊಡದೆ) ಆ ಹಾರೂರ ಹುಡುಗ ಆ ಹೊಲ್ಯಾನ ಮಾರೀವ್ಯಾಗಿನ ರಕ್ತಾ ತೊಳ್ಯಾಕ ನನ್ನ ಚರಿಗ್ಯಾಗಿನ ನೀರು ಕೇಳಬೇಕಸ ! ನಾನೂ ಮತ್ತ ಅವಗ ಅಂದಬಿಟ್ಟೆ: ಏನು ಶೀಲರೋ ನಿಮ್ಮ ಹಾರೂರದು ಅಂತ.

[ ಬಿದ್ದಾಡಿ ಬಂದು ಚೀಟಿ ಕೊಟ್ಟು ಅಪ್ಪಣೆ ಪಡೆದುಕೊಂಡು ಹೋಗುವನು ]

ಕ — ಏನೂ ಧರ್ಮ ಉಳಿದಿಲ್ಲ ಶೆಟ್ಟರೇ, ನೀವು ಹೇಳಿಧಾಂಗ ....

[ ಬಿದ್ದಾಡಿ ಸರ್ವೋತ್ತಮನನ್ನು ಕರಕೊಂಡು ಬರವನು ]

ಬಿ — ದಯಮಾಡಿಸಬೇಕು. ಕುಳಿತುಕೊಳ್ಳಿ.

ಮಾ — (ಕನಕರಾಯರಿಗೆ, ಮೆಲ್ಲನೆ) ರಾಯರs, ಇವರs ನೋಡ್ರಿ ಅವರು.

ಕ — ಆಂ ! (ಸರ್ವೋತ್ತಮನನ್ನು ತೋರಿಸಿ) ಇವರsನs ?

ಮಾ — ಹೌದ್ರಿ, ಇವರs.

ಕ — ಸರ್ವೋತ್ತಮಾ !

ಸ — ಏನು ?

ಕ — ಅರೇದವನ ಹಾಂಗ ನನ್ನs ಕೇಳತೀಯೇನು ? ಕೇಳು ಈ ಶೆಟ್ಟರು ಏನು ಹೇಳತಾರ.

ಮಾ — ನನಗೇನು ಗೊತ್ರೀ, ನೋಡಿದ ಮಾತು ನೋಡಿದ್ಹಾಂಗ ಹೇಳಿದೆ. ಅವರs ಹೇಳ್ಲಿ, ಹೊಲೆದಾಸನ ತಲೀ ಹಿಡಕೊಂಡು ಕುಂತಿದ್ದರೋ ಇಲ್ಲೊ.

ಕ — (ಸರ್ವೋತ್ತಮನಿಗೆ) ಹೌದೇನೋ ?

ಸ — ಹೌದು.

ಕ — ಆಂ ! ಹೌದs ! ಎಲಾ ಭ್ರಷ್ಟಾ ! ಹೊಲೇರ ಮೈಲಿಗಿ ಮನ್ಯಾಗೆಲ್ಲ ಕಲಸಿಬಿಟ್ಟೆಯಾ ?

**ಸ** — (ಶಾಂತವಾಗಿ) ಏನೋ ಪಾಪ, ಗಾಯ ಆಗಿತ್ತು ಅಂತ ಉಪಚಾರ ಮಾಡಿದೆ. ಇದಕ ಶೆಟ್ಟರನ್ನ ನೀರು ಕೇಳಿದೆ.......

**ಕ** — (ಉದ್ರೇಕಗೊಂಡು) ಹೂಂ ಹೂಂ ! ಉಪಚಾರ ಮಾಡಿದ್ಯಾ ? ಏನು ದೊಡ್ಡ ಬುದ್ಧನ ಅವತಾರ ನೀನು ! ಉಪಚಾರಮಾಡಿದನಂತ ಉಪಚಾರಾ ! ಇದೆಲ್ಲಾ ಆ ಗಾಂಧೀ ವಿಚಾರದ ಬೆನ್ನು ಹತ್ತಿದ್ದರ ಪರಿಣಾಮ ! ಆ ಹುಡಿಗಿ ಯಾರು ? ಹೇಳು ಯಾರು ಆ ಹುಡಿಗಿ ? ರಸ್ತೇದಾಗ ಎರಡನೇ ಹೆಂಗಸರ ಸಂಗತೀಲೆ ಹರಟೀ ಹೊಡಕೋತ ನಿಂತಿದ್ದ್ಯಾ ? ಉಟ್ಟದ್ದು ತಲೀಗೆ ಸುತ್ತೀದಿ ಕುಂದ್ಹಾಂಗಾತು. ಆತು, ನಮಗೂ ನಿಮಗೂ ಎಂದೂ ಬಗೆಹರಿಯೂದಿಲ್ಲ. ಮುಖಕ್ಕ ಮುಖಾ ಕೂಡೋವಲ್ಲ ಇವು. ನಿಮ್ದು ಹಾದಿ ಬ್ಯಾರೆ, ನಮ್ದು ಹಾದಿ ಬ್ಯಾರೆ. ಮುಗಿಯಿತು. ನನ್ನ ಮನಿ ಋಣಾನು-ಬಂಧ ಇವತ್ತಿಗೆ ಕಡಿಧಾಂಗಾಯಿತು (ಬಿಜ್ಜುನಾಥನಿಗೆ) ರಾಯರ, ತಮಗೆ ಸುಮ್ಮನೆ ತೊಂದರೆ ಕೊಟ್ಟದ್ದಾಯಿತು. ಕ್ಷಮಿಸಿರಿ. ಬರುತ್ತೇನೆ.

**ಬಿ** — (ತಡೆದು) ಅಲ್ಲ, ರಾಯರೆ, ತಾವು ಬಂದ ಕೆಲಸ ಕೂಡ ತಿಳಿಸದೆ ಹಾಗೇ ಹೊರಟುಬಿಟ್ಟಿರಲ್ಲ ! ಸ್ವಲ್ಪ ನಿಧಾನವಾಗಿ........

**ಕ** — ಇಲ್ಲ, ಇಲ್ಲ. ನಾನು ಬಂದ ಕೆಲಸ ಆದಂತಾಯಿತು. ನಿಮಗೆ ತೊಂದರೆ ಕೊಡುವ ಭಾಗ ಬೀಳಲಿಲ್ಲ. ಈಗ ನಡೆದ ಘಟನೆಯನ್ನು ವಿಪರೀತ ಭಾವಿಸಬೇಡಿರಿ.

[ ಸರ್ವೋತ್ತಮನನ್ನು ದುರುದುರು ನೋಡುತ್ತ ಹೋಗುವನು ]

[ ಸರ್ವೋತ್ತಮ ನಿಂತಲ್ಲಿಯೆ ಕುರ್ಚಿಯ ಮೇಲೆ ಒರಗುವನು ]

[ ಬಿಜ್ಜುನಾಥ ಹತ್ತಿರ ಬಂದು ಉಪಚರಿಸುವನು ]

**ಚಿ** — (ಶೆಟ್ಟಿಗೆ) ಎಷ್ಟು ತಡವರೂ ಕಡೀಕೆ ಹೇಳೀಬಿಟ್ಟರಿ.

**ಮಾ** — ನನಗೆ ಹ್ಯಾಗ ತಿಳೀಬೇಕ್ರೀ ಅದೆಲ್ಲ ಗುಟ್ಟು ?

**ಬಿ** — ( ಸರ್ವೋತ್ತಮನಿಗೆ ) ತಾವು ಬಹಳ ನೊಂದುಕೊಂಡಂತೆ ಕಾಣುತ್ತದೆ. ಸಮಾಧಾನ ತಂದುಕೊಳ್ಳಿರಿ. ಸ್ವಲ್ಪ ಸಿಟ್ಟಿನ ಸ್ವಭಾವ ಇರಬೇಕು. (ಕರವಸ್ತ್ರದಿಂದ ಗಾಳಿ ಹಾಕುವನು)

**ಸ** — ದುರ್ದೈವ ! ಇಂಥಾ ಎರಡು ಮನಸ್ಸು ಕೂಡುವುದು ಬಹಳ ಕಷ್ಟ, ಇನ್ನುಮೇಲೆ. ಇಂದಿನಿಂದ ಬಿಡುಗಡೆಯುಂತೂ ಆದಂತಾಯಿತಲ್ಲ ! ಆಗಲಿ, ತಮಗೆ ತೊಂದರೆ ಕೊಟ್ಟೆ. ಬರುತ್ತೇನೆ. (ಏಳಲು ಹವಣಿಸುತ್ತಾನೆ)

**ಬಿ** — (ಕೂಡಿಸುತ್ತ) ಕೂತುಕೊಳ್ಳಿರಿ, ಕೂತುಕೊಳ್ಳಿರಿ. ಸ್ವಲ್ಪ ವಿಶ್ರಮಿಸಿರಿ. (ಬಿದ್ದಾಡಿಗೆ) Boy !

[ ಬಿದ್ದಾಡಿ ಬರುವನು

**ಬಿ** — ಲೆಮನ್‌ಜ್ಯೂಸ್ ಲಾವ್.

[ ಬಿದ್ದಾಡಿ ಹೋಗುವನು ]

ತಾವು ಕಂಡ ಆ ಬಾಲೆ ಯಾರು ತಮಗೆ ಗೊತ್ತೆ ? ಪರಿಚಿತರೇನು? ಎಲ್ಲಿಯು ವರು?

**ಚಿ** — (ಶೆಟ್ಟರಿಗೆ) ನೋಡಿದಿರಾ ಶೆಟ್ಟರ, ಪಾಪ ಅವಂದೇ ಅವಗ ಸಾಕಾಗೇದ ; ಇವ ಹುಡಿಗೀ ಹೆಸರು-ದಶಿ ಕೇಳತಾನ !

**ಮಾ** — (ಆಚಾರ್ಯರಿಗೆ) ಹೌದು ಮತ್ತ, ಆವರವರದು ಆವರ ವರಿಗೆ ಹತ್ತಿರೋದs. (ಸರ್ವೋತ್ತಮರಿಗೆ) ರಾಯರ, ಇಲ್ಲಿ ನನ್ನ ಮಾತಷ್ಟು ಕೇಳ್ರಿ. ಅದ್ನೋಡ್ರಿ, ಅದು ಸಂಸಾರದಾಗಿನ ಮಾತು. ಒಮ್ಮೆ ಸಿಟ್ಟಿಗೇಳ ತಾರು ; ಒಮ್ಮೆ ಪಿರುತಿ ಮಾಡತಾರು. ಅದು ಹಾಗs ನಡದಿರೋದs. ಅದನ್ನ ಮನಸ್ಸಿಗೆ ಹಚಿಗೋಬಾರದು ನೋಡ್ರಿ.

**ಚಿ** — ಹೌದು, ಎಲ್ಲಾರ ಮನೀ ದ್ವಾಸಿನೂ ಹುಳಕs ಮತ್ತ ! ಸರ್ವೋತ್ತಮರಾಯಾ, ನೀಯೇನೂ ಕಾಳಜೀ ಮಾಡಬ್ಯಾಡ. ಇದs ದಿವ ಸೇನು ಕಡೆತನಕ ಉಳಿಯೂದಿಲ್ಲ. ಸಿಕ್ಕೀತು ನೌಕರಿ, ಇವತ್ತಿಲ್ಲ ನಾಳೆ. ಈ ನಮ್ಮ ಸಾಹೇಬರಿಗೆ ಹೇಳಿದರ ಇವರs ಹಚ್ಚಿಕೊಟ್ಟಾರು.

**ಬಿ** — ಏನಂದರಿ ಆ ಹುಡುಗೀ ಹೆಸರು ?

**ಸ** — (ಉಸಿರೆಳೆದು) ಹೆಸರೇನೋ ಅಂಜನಾ ಅಂತ. ಪಂಢರಪುರ ದವರಂತ. ಇನ್ನೂ ಮದಿವಿ ಆಗಿಲ್ಲಾ ಅಂದರು.

ಬಿ — ಯುರೇಕಾ ! ಯುರೇಕಾ ! Good-luck ! ಕೇಳಿದಿರಾ ಆಚಾರ್ಯಸ್ವಾಮಿ ? ಇನ್ನೇನು ನಿಮ್ಮ ಆತಂಕ ದೂರಾಯಿತೋ ಇಲ್ಲೊ ? ಬೇಡಿದಷ್ಟು ಸಂಭಾವನಾ....

ಚಿ — (ಅಸಮಾಧಾನ ತೋರಿಸುತ್ತ) ಏಏನಿಲ್ಲ, ಬರ್ತೇನಿ ರಾಯರ, ಬರ್ತೇನಿ.

ಬಿ — ಇಲ್ಲಿ ಸಲ್ಪ ತಡೀರಿ.

ಚಿ — ಇಲ್ಲ, ಇಲ್ಲ. ಹೋತ್ತಾಯಿತು. ಬರ್ತೇನಿ.

[ ಹೋಗುವನು ]

[ಬಿದ್ದಾಡಿ ಲೆಮನ್ ಜೂಸ್ ತಂದು, ಒಡೆದು ಮೂರು ಗ್ಲಾಸಿನಲ್ಲಿ ಹಾಕಿ ಮೂವರಿಗೂ ಕೊಡುವನು. ಮೂವರೂ ಕುಡಿಯುವರು. ಬಿದ್ದಾಡಿ ಬರಿದಾದ ಗ್ಲಾಸುಗಳನ್ನು ಒಯ್ಯುವನು.]

ಬಿ — ಅಲ್ಲ, ತಮಗೆ ಅಂಥ ಪ್ರಸಂಗ ಇದ್ದರೆ ಹೇಳ್ರಿ, ನಾನು ನಮ್ಮ ಕಾಲೇಜಿನಲ್ಲಿಯೇ ಕೆಲಸ ಕೊಡಬಹುದು.

ಸ — (ಆಸೆ ಹುಟ್ಟಿ) ಏನು, ತಮ್ಮ ಕಾಲೇಜು ?

ಬಿ ಹೌದು, ನಮ್ಮ ಕಾಲೇಜೇ. Privateಉ. ನಾನೇ ಅದರ ಪ್ರಿನ್ಸಿಪಾಲನಿದ್ದೇನೆ.

ಸ — ಆಂ ! ಹೆಸರೇನು ಕಾಲೇಜದ್ದು ?

ಬಿ — ತಿರಗಲಿ "ಬಿ. ಸಿ. ಐ." ಕಾಲೇಜು. ಒಪ್ಪಿಗಿ ಇದ್ದರೆ ಹೇಳ್ರಿ, ಸದ್ಯ ಕೊಡಸತೀನಿ.

ಸ — ಓಹೊ, ಆಗಲಿ. ವಿಚಾರಮಾಡಿ ತಮಗ ತಿಳಿಸತೇನಿ ಬಹಳ ಉಪಕಾರವಾಯ್ತು. Thank you. ಬರ್ತೇನಿ, ನಮಸ್ಕಾರ.

[ ಹೋಗುವನು ]

ಬಿ — ( ಸರ್ವೋತ್ತಮ ಹೋದ ಕಡೆಗೇ ನೋಡುತ್ತ ) Sensi tve good-for-nothing fool ! ಕೆಲಸಕ್ಕೆ ಬಾರದ ಹುಡುಗರು ನೋಡ್ರಿ

ಶೆಟ್ಟರೆ ! ಕೈಲಾಗದವ್ರು ! ಹೋಗಲಿ, ಆಚಾರ್ಯರೇನು ನಮ್ಮ ಕೆಲಸಾ ಮಾಡಬಹುದಲ್ಲೋ ?

ಮಾ — ಓ ! ಕೈಯಾಗ ದಕ್ಷಿಣಿ ಬಿದ್ದೈತಿ ಅಂದವ್ಯಾಗ ಆಗದೇನು ಮಾಡತೈತಿ ?

ಬಿ — (ಎದ್ದು ಕೋಟು ಹಾಕಿಕೊಳ್ಳುತ್ತ) ಶೆಟ್ಟರೆ, ಚಹಾಕ್ಕೇನು ಅತ್ಲಾಗs ಹೋಗೋಣೊ ? ಏನು ಇಲ್ಲಿಗೇ ತರಿಸೋಣೊ ?

ಮಾ — ಇವೇ ಈಗ ಮತ್ತ ಅದನ್ನೇನೊ ಕುಡಿಸಿದಿರಲ್ಲ. ಮತ್ತ ಯಾಕ ?

ಬಿ — ಅದೇನು ಬರಿ ನೀರು. ಗಂಟಲ ಒಂದಿಷ್ಟು ಬಿಸಿ ಆಗಬೇಕು. ಇಲ್ಲಿಗೇ ತರಿಸಿಬಿಡತೇನಿ. ತಗೊಂಡs ಹೊರಡೋಣು.

ಮಾ — ಹಾಗs ಆಗಲಿ. ನಾವು ಒಲ್ಲೆ ಅಂದರ ನೀವು ಕೇಳತಿರಾ ?

ಬಿ — Boy !

[ ಬಿದ್ದಾಡಿ ಬರುವನು ]

ದೊ ಚಾ ಲಾವ್. ಜಲ್ದಿ ಲಾವ್.

[ ಹೋಗುವನು ]

( ಟೇಬಲ್ಲಿಗೆ ಬಂದು ಕುಳಿತು ಲೆಕ್ಕದ ಪುಸ್ತಕ ತೆರೆದು ) ಮತ್ತೇನು ಶೆಟ್ಟರೆ, ನಿಮ್ಮ ವ್ಯಾಪಾರ ಈಗ ಸರಳಾಗಿರಬೇಕು.

ಮಾ — (ಉಗಳು ನುಂಗುತ್ತ) ಅರ್ಧಮುರ್ದಾ ಆಗೇತರಿ. ಯ್ಯಾಪಾರ ಅಂದ ಕೂಡ್ಲೆ ನೆಪ್ಪಾತು; ಇಕಾ ಹಿಡೀರಿ ನಿಮ್ಮ ಕೈಗಡಾನ. ( ಕಿಸೆಯಿಂದ ನಾಲ್ಕು ನೋಟು ತೆಗೆದು ಕೊಟ್ಟು ) ಈ ಹತ್ತು ರೂಪಾಯಿ ನಿಮ್ಮ ಗಂಟು ದುಡದದ ಬಡ್ಡಿರಿ.

ಬಿ — ಛೆ ಛೆ, ಇದನೆಲ್ಲಿ ನಾ ಕೇಳಿದೆ ನಿಮ್ಮನ್ನ ? ಸುಮ್ಮನೆ ಸಹಜ ವ್ಯಾಪಾರದ ಸುದ್ದಿ ಕೇಳಿದೆ ಅಷ್ಟೆ. ನೀವೇನೋ ಬ್ಯಾರೇನ ತಿಳಕೊಂಡಿರಿ ಕಾಣತದ.

ಮಾ — ಹಾಗಂದರ ಹ್ಯಾಗರಿ ? ಕೈ ಬಾಯಿ ಸುದ್ದ ಇರಬೇಕು. ಕೊಡೂದು ಕೊಡಾಕಬೇಕು, ತೊಗೊಳ್ಳೋದು ತೊಗೊಳ್ಳಾಕಬೇಕು. ಯ್ಯಾಪಾರ ಸರಳ ಇರಬೇಕು ನೋಡ್ರಿ.

[ ಬಿದ್ದಾಡಿ ಚಹಾ ತಂದು ಕಪ್ಪಿನಲ್ಲಿ ಹಾಕಿ ಕೊಡುವನು. ಇಬ್ಬರೂ ಕುಡಿಯುತ್ತಿರುವಾಗಲೆ ]

ತೆರೆ

———

## ದೃಶ್ಯ ೪.

[ ತೋಟಕ್ಕೆ ಹೋಗುವ ದಾರಿ ]

[ ಮಲ್ಲಿನಾಥರಾಯರು ಕೈಯಲ್ಲಿ ಬಡಿಗೆ ತಿರವುತ್ತ ವಿಚಾರಭಾರದಲ್ಲಿ ಬರುವರು. ]

ಏ — ( ಹಿಂದಿನಿಂದ ಬಂದು ) Good-evening Mr. Mallinath !

[ ಮಲ್ಲಿನಾಥರಾಯರು ಉತ್ತರ ಕೊಡದೆ ಮುಂದೆ ಸಾಗುವರು ]

Oh ! Mr. Mallinath, ಏನು, ವಾಕಿಂಗಕ್ಕೆ ಬಂದಿದ್ದೀರೋ ?

[ ಮಲ್ಲಿನಾಥರಾಯರು ಇನ್ನೂ ಸುಮ್ಮನೆ ಮುಂದೆ ಸಾಗಿರುವರು ]

Hullo ! Mr. Mallinatharao !

ಮ — (ತಿರುಗಿ ನೋಡಿ ಒಮ್ಮೆಲೆ ನಿಂತು) Oh ! You ! Good evening Doctor. ಎತ್ತ ಕಡೆಗೆ ?

ಏ — ಯಾವದೋ ಗಹನವಾದ ವಿಚಾರದಲ್ಲಿ ತಾವು ಇರಬೇಕು. ನಾನು ಕೂಗಿಯೇ ಕೂಗಿದೆ.

ಮ — ಹೀಗೇನು ? ಕ್ಷಮಿಸಬೇಕು. ತಲೆ ಇದೆಯೆಂದ ಮೇಲೆ ಏನಾದರೂ ವಿಚಾರ ನಡೆದೇ ಇರಬೇಕಲ್ಲ.

ಏ — ಹಾಂ ! ಏನು ವಿಚಾರ ಅಷ್ಟು ಗಹನವಾದದ್ದು? ಹೇಳಿರಿ; ಅಂದರೆ ಏಸುವಿನ ತಂದೆಯು ಬೆಳಕು ತೋರಿಸುತ್ತಾನೆ.

ಮ — ಗಹನವಾದದ್ದೇನೂ ಇಲ್ಲ. ಆದರೆ ತಲೆಯಲ್ಲಿ ಮಾತ್ರ ಮೇಲಿಂದ ಮೇಲೆ ಸುಳಿದಾಡಹತ್ತಿದೆ.

ಏ — ಏನದು ?

**ಮ** — ಮನುಷ್ಯನನ್ನು ಎತ್ತಿ ಹಿಡಿಯಲು ಹುಟ್ಟಿದ ಈ "ಧರ್ಮ" ಎಂಬುವದೇ ಮನುಷ್ಯನ್ನ ಮುಳುಗಿಸಲಿಕ್ಕೆ ಕಾರಣ ಆಗೇದಲ್ಲ ಈಗ? ಈ ದೈವದುರ್ವಿಪಾಕ ಹ್ಯಾಂಗ ಬಂತೂ ಅಂತ. ಭದ್ರವಾದ ತಳಹದೀ ಮ್ಯಾಲ ನಿಂತ ಸನಾತನ ಆರ್ಯಧರ್ಮ ಒಮ್ಮೆಲೆ ಕುಸಿಬೀಳುವ ಹೊತ್ತು ಯಾಕ ಬಂತೂ ಅಂತ. ಒಂದೊಂದರಲ್ಲಿಯ ದೋಷ ತೊಡೆದುಹಾಕುವದಕ್ಕೆಂದು ಹುಟ್ಟಿದ ಮತಗಳು ಆತ್ಮೋನ್ನತಿಯ ಮಾರ್ಗ ಸುಗಮ ಮಾಡುವದನ್ನು ಬಿಟ್ಟು, ಒಂದಕ್ಕೊಂದು ತೊಡಕಾಗಿ, ಒಂದನ್ನೊಂದು ನುಂಗಲಿಕ್ಕೆ ಹ್ಯಾಂಗ ನಿಂತವೂ ಅಂತ. ಇವೆಲ್ಲಾ ಹೊಂದುಗೂಡಿಸಲಿಕ್ಕೆ ಇನ್ನೊಂದು ಸಮನ್ವಯ ಧರ್ಮ ಇರಲಿಕ್ಕಿಲ್ಲೇನು ? ಒಮ್ಮೊಮ್ಮೆ ಹೀಗೂ ಅನಿಸುತ್ತದೆ: ಸಮನ್ವಯ ಮಾಡಲಿಕ್ಕೆ ಹೊರಟ ಈ ನವಧರ್ಮ ಒಂದು ಬೇರೆ ಧರ್ಮವಾಗಿಯೆ ಎಲ್ಲಿ ಉಳಿಯುವದೊ ಎಂದು ಭೀತಿ ಬರುತ್ತದೆ.

**ಪಿ** — ಹೀಗಾಗಲಿಕ್ಕೆ ಕಾರಣ ಉಂಟು ನಿಮ್ಮಲ್ಲಿ. ನಿಮ್ಮ ಸನಾತನ ಧರ್ಮದ ತತ್ವಗಳು ನೂರಾರು ವಿಧವಾಗಿರುವದರಿಂದ ಒಂದಕ್ಕೊಂದು ಹೊಂದಿಕೆಯಾಗುವದಿಲ್ಲ. ಆದೇ ನಮ್ಮ ಕ್ರಿಶ್ಚಿಯನ್ ಧರ್ಮ ಹಾಗಲ್ಲ. ಒಂದೇ ಆಗಿದೆ. ನಿಮ್ಮ ಧರ್ಮದಲ್ಲಿ ಬ್ರಾಹ್ಮಣರು ಹೆಚ್ಚು, ಶೂದ್ರರು ಕಡಿಮೆ, ಹೊಲೆಯರು ಕೀಳರು ಎಂದು ಹೇಳಿದೆ.

**ಮ** — ಅದು ಒಂದು ಕಾಲಕ್ಕೆ ಮಾಡಿದ ಸಮಾಜವ್ಯವಸ್ಥಾ. ಧರ್ಮ ಅಲ್ಲ. ಆದರಲ್ಲಿಯೂ ಕೂಡ ಒಂದು ಹೆಚ್ಚಿನ ಸತ್ವ ಇತ್ತಂತೇ ಸಾವಿರಾರು ವರ್ಷಗಳವರೆಗೆ ನಡೆಯುತ್ತಾ ಬಂತು.

**ಪಿ** — ಅದಕ್ಕೆ ಏನೇ ಅನ್ನಿರಿ. ಆದರೆ ನಮ್ಮ ಕ್ರಿಶ್ಚಿಯನ್ ಧರ್ಮವು ಬಹಳ ವಿಶಾಲವಾಗಿದೆ. ಇಲ್ಲಿ ನೋಡಿರಿ, ( ಎಂದು ಡಗಲಂಗಿಯೊಳಗಿಂದ ಬೈಬಲ್ ತೆಗೆದು ) "ನಮ್ಮ ಹೊಸ ಒಡಂಬಡಿಕೆಯಲ್ಲಿ ದೇವರಿಗೂ ಕರ್ತನಾದ ಯೇಸುಕ್ರಿಸ್ತನಿಗೂ ದಾಸನಾದ ಯಾಕೋಬನು ತನ್ನ ಪತ್ರಿಕೆಯ ಎರಡನೆಯ ಸಂಧಿಯಲ್ಲಿ ಹೀಗೆ ಹೇಳುತ್ತಾನೆ: ನನ್ನ ಸಹೋದರರೆ, ಮಹಿಮೆಯುಳ್ಳ ನಮ್ಮ ಕರ್ತನಾಗಿರುವ ಯೇಸುಕ್ರಿಸ್ತನ ವಿಸ್ವಾಸವನ್ನು ಮುಖದಾಕ್ಷಿಣ್ಯಗಳ ಸಂಗಡ ಇಟ್ಟುಕೊಳ್ಳಬೇಡಿರಿ. ಹೇಗೆಂದರೆ ಚಿನ್ನದ ಉಂಗರುವುಳ್ಳ ಮನುಷ್ಯನು,

ಮಿಂಚುವ ವಸ್ತ್ರವನ್ನು ಧರಿಸಿಕೊಂಡು ನಿಮ್ಮ ಸಭೆಗೆ ಬರಲು, ಮತ್ತು ಬಡವನು ಮೈಲಿಗೆ ವಸ್ತ್ರವನ್ನು ಧರಿಸಿಕೊಂಡು ಬರಲು, ನೀವು ಮಿಂಚುವ ವಸ್ತ್ರ ಧರಿಸಿ ಕೊಂಡವನ ಮೇಲೆ ಲಕ್ಷ್ಯವಿಟ್ಟು ಆತನಿಗೆ 'ನೀವು ಸುಖವಾಗಿ ಇಲ್ಲಿ ಕುಳಿತು ಕೊಳ್ಳಿ' ಎಂದು ಹೇಳಿ ಬಡವನಿಗೆ 'ನೀನು ಅಲ್ಲಿಯೇ ನಿಂತುಕೋ!' ಇಲ್ಲವೆ 'ಇಲ್ಲಿ ನನ್ನ ಪಾದಪೀಠದ ಹತ್ತಿರ ಕೂತುಕೊ' ಅಂದರೆ ನಿಮ್ಮಲ್ಲಿ ಪಕ್ಷ ಪಾತ ಮಾಡಿಕೊಂಡು ದುರಾಲೋಚನೆಗಳ ನ್ಯಾಯಾಧಿಪತಿಗಳಾದಿರಲ್ಲ? ಕೇಳಿರಿ, ದೇವರು ಈ ಲೋಕದಲ್ಲಿ ಬಡವರನ್ನು ವಿಶ್ವಾಸದಲ್ಲಿ ಐಶ್ವರ್ಯವಂತ ರಾಗಿಯೂ ತನ್ನನ್ನು ಪ್ರೀತಿ ಮಾಡುವವರಿಗೆ ವಾಗ್ದತ್ತ ರಾಜಕ್ಕೆ ಬಾಧ್ಯಸ್ತ ರಾಗಿಯೂ ಆದುಕೊಳ್ಳಲಿಲ್ಲವೊ?" ನಮ್ಮ ಧರ್ಮದಲ್ಲಿ ಕೀಳು ಮೇಲಿಲ್ಲ.

**ಮು** — (ನಗುತ್ತ) ಯಾವ ಧರ್ಮವೂ "ಧರ್ಮ" ಎನಿಸಿಕೊಳ್ಳ ಬೇಕಾದರೆ ಹೀಗೇ ಇರುತ್ತದೆ.

**ಏ** — ಇರಬಹುದು. ಇಲ್ಲಿ ನೋಡ್ರಿ ಮಲ್ಲಿನಾಥರಾವ್, ನಿಮ್ಮ ಅಂಜನಾಬಾಯಿ ಇದ್ದಾರಲ್ಲ, ಅವರ ವಿವಾಹದ ಬಗ್ಗೆ ಏನಾದರೂ ನಿಶ್ಚಯಮಾಡಿದ್ದೀರಾ?

**ಮು** — ಅವಳ ವಿವಾಹದ್ದೇ ಒಂದು ಸಮಸ್ಯೆಯಾಗಿದೆ ನನಗೆ.

**ಏ** — ಯಾಕೆ?

**ಮು** — ಪಂಢರಪುರದ 'ಅನಾಥಬಾಲಿಕಾಶ್ರಮ'ದಲ್ಲಿ ಹುಟ್ಟಿ ಬೆಳೆದ ವಳು. ಈ ಅವಳ ಹುಟ್ಟು ಬೆಳವಣಿಗೆ ಇವೇ ಅವಳ ವಿವಾಹಕ್ಕೆ ಕಾಲ್ತೊಡ ಕಾಗಿ ನಿಂತಿವೆ. ಈ ದೃಷ್ಟಿಯಿಂದ ನೋಡಿದಾಗ ಮಾತ್ರ ನಿಮ್ಮ ಸಮಾಜ ಒಂದು ಹೆಜ್ಜೆ ಮುಂದಿಟ್ಟು ವ್ಯವಸ್ಥೆ ಮಾಡಿದೆ ಎನಬೇಕು.

**ಏ** — ಅದಕ್ಕೇ ನಾನು ತಮಗೆ ಹೇಳಿದೆ: ನಮ್ಮ ಕ್ರಿಶ್ಚಿಯನ್ ಧರ್ಮ ಬಹಳ ವಿಶಾಲವಾಗಿದೆ ಎಂದು. ಅನ್ಯಥಾ ಭಾವಿಸಬಾರದು ಮತ್ತೆ. ನಿಮ್ಮ ಈ ಸಮಸ್ಯೆಗೆ ನಿಮ್ಮ ಸನಾತನಧರ್ಮ ಪರಿಹಾರ ಕೊಡಲಾರದು.

[ತೆರೆಯಲ್ಲಿ ಬಾಪಯ್ಯ ಬಿಸ್ಡ ಸಪ್ಪಳ]

ಮ — ಓ ! ಅದೋ ! ಯಾರೋ ಬಾವಿಯಲ್ಲಿ ಬಿದ್ದರು ! (ಅವಸರದಿಂದ ಅತ್ತ ಧಾವಿಸುತ್ತ) ನಾನು ಹೋಗುತ್ತೇನೆ, ನೀವೂ ಅತ್ತ ಕಡೆಗೇ ಬಂದುಬಿಡಿರಿ. ( ಓಡುತ್ತ ಹೋಗುವನು )

ವಿ — ಓ ! ಹೀಗೋ ! ಉಪದ್ರವದಲ್ಲಿಯೇ ಜನಗಳನ್ನು ಪರಾಂಬರಿಸುವದು ನಮ್ಮ ಕ್ರಿಶ್ಚಿಯನ್ ಧರ್ಮ. ನಾನೂ ಬಂದೆ ಮಲ್ಲಿನಾಥ ರಾವ್ ! [ಹಣೆ ಭುಜ ಮುಟ್ಟಿಕೊಂಡು ದೇವರನ್ನು ಸ್ಮರಿಸಿ ಹಿಂದಿನಿಂದ ಹೋಗುವನು]

---

## ದೃಶ್ಯ ೫.

[ ಅಂಜನಾಬಾಯಿಯ ಮನೆಯಲ್ಲಿಯ ಒಂದು ಕೋಣೆ ]

**ಅಂ** — [ ಪುಸ್ತಕವನ್ನು ಓದುತ್ತ ಕುಳಿತವಳು ಬೇಸರಗೊಂಡಂತೆ ಪುಸ್ತಕ ಎಸೆದು, ಎದ್ದುಬಂದು, ನೂಲುವ ರಾಟೆಯ ಎದುರಿಗೆ ಕುಳಿತು ಒಂದೆರಡು ಸುತ್ತು ತಿರಿವಿ, ನೂಲು ತೆಗೆದು ಅದೂ ಬೇಸರಬಂದು ಅಲ್ಲಿಂದ ಎದ್ದುಬಂದು ಮಂಚದ ಮೇಲೆ ಅತ್ತ ಬಿದ್ದುಕೊಂಡು "ಮನೆಯುವರು ? ಮನೆಯುವರು ! ಮನೆಯುವರು ಎಲ್ಲಿಗೆ ಹೋಗ್ಯಾರ ? ಹಃ ಹಃ ಹಃ" ಎಂದು ಬಿದ್ದುಬಿದ್ದು ನಗುವಳು. "Good-morning !" ಎಂದು ಮತ್ತೆ ನಗುವಳು. ಒಮ್ಮೆಲೆ ಎದ್ದು ನಿಂತು ಗುಣುಗುಣಿಸುತ್ತ ಹಾಡಲು ಪ್ರಾರಂಭಿಸುವಳು. ]

ರಾಗ : ಬಿಹಾಗ — ತಾಳ : ತ್ರಿವಟ

ಕಾತರಿಸುವದೌ ಮನವಿಂದು | ನೂತನ ಭಾವವು ಜನಿಸಲದೊಂದು ||
ಹೃದಯದ ಪದುಮದಿ ಮುದಿಸುತಲಿರಲು | ಉಸಿಸಿ ಪರಸು ಬರೆ
ಬೆದರಿದ ಅಳಿಯೊಲು ||

[ ಹಾಡು ಮುಗಿಯುವ ಹೊತ್ತಿಗೆ ಚೆನ್ನಿ ಓಡಿಬರುವಳು. ]

**ಚೆ** — ಯವ್ವಾ ! ಯವ್ವಾ ! ( ಕಾಲಮೇಲೆ ಬೀಳುವಳು ) ಯವ್ವಾ ನನ್ನ ಉಡ್ಯಾಗ ಹಾಕ್ಕೊಂಡು ಪಾರುಮಾಡು ನನ್ ತಾಯಿ ! ಯಾರೋ ಅಂದಕ್ಯಾಸ ಕೈಬಿಡಬ್ಯಾಡ ನನ್ನ ಹಡೆದವ್ವ !

**ಅಂ** — ಏನ್ ? ಏನಿದು ! ( ಎಬ್ಬಿಸುತ್ತ ) ನನ್ನ ಕಾಲನ್ನೇಕೆ ಹಿಡೀತಿ ? ಏಳು, ಏಳು. ಆದದ್ದಾದರೂ ಏನಾಗೇದ ಅಂಥಾದು ?

[ ಬಿದ್ದಾಡಿ ಹಿಂದಿನಿಂದ ಓಡಿ ಬಂದು ]

**ಬಿದ್ದ** — ಎಲ್ಲಿ ಹೊಕ್ಕೀ ನಿಂದ್ರ ನಿನ. ( ಗಕ್ಕನೆ ನಿಂತು ಪೋಲಿಸನಂತೆ ಕಾಲು ಜೋಡಿಸಿ ಸ್ಯಾಲ್ಯೂಟ್ ಹೊಡೆದು ) ಸರ್, ಬಿಡ್ರಿ ಈಕಿನ್ನ ಮೊದಲ. ಮೊದಲ ಹೊರಗ ಹಾಕ್ರಿ. ಮನ್ಯಾಗಿಂದ ಹೇಳದ ಕೇಳದ ಓಡಿಬಂದಾಳು.

**ಅಂ —** (ಚೆನ್ನಿಯನ್ನು ಒತ್ತಟ್ಟಿಗೆ ಕೂಡಿಸಿ ಬಂದು, ಬಿದ್ದಾಡಿಗೆ ಎದುರಾಗಿ ನಿಂತು) ಅಲ್ಲಪ್ಪಾ, ಸ್ವಲ್ಪ ಸಮಾಧಾನ ಮಾಡು. ಏನು ನ್ಯಾಯ ಬಂತು, ಯಾಕ ಬಂತು ? ಮೊದಲ ಹೇಳು. ವಿಚಾರಮಾಡೋಣ. ಹಾಂಗೆಲ್ಲ ಹೆಣ್ಮಗಳ ಮೇಲೆ ಕೈಮಾಡಬಾರದು.

**ಬಿದ್ದ —** ಇಂತಾ ಹೆಣ್ಣಿಗೆ ಕೈಮಾಡಬಾರದು ಅಂದ್ರ ಹ್ಯಾಗ್ರೀ ? ಅದು ಮಾತಿಗೆ ಮಣಿಯೊ ಹೆಣ್ಣಲ್ರೀ ಅದು. ಸಾಹುಕಾರ ದೇವರಿಗೆ.... ಅದರ ಪೆಟ್ಟs ಆಗಬೇಕ್ರಿ.

**ಅಂ —** ಛೀ, ಹಾಂಗೆಲ್ಲಾ ಅನಬಾರದು.

**ಬಿದ್ದ —** ಮತ್ತೇನನಬೇಕಂತೀರಿ ? ಹೇಳ್ರಿ.

**ಅಂ —** ಅಲ್ಲಪಾ, ಮೊದಲ ಏನು ನಡೀತು ಹೇಳು. ಕೂತಗೊ.

**ಬಿದ್ದ —** ಇದು ನೋಡ್ರಿ ಸಽರ್........

**ಅಂ —** (ನಗುವಳು)

**ಬಿದ್ದ —** ಯಾಕ್ರೀ ನಗತೀರಿ ? ಏನ್ ತಪ್ಪಾತೇನ್ರಿ ಮಾತಿನಾಗ ?

**ಅಂ —** ಏನಿಲ್ಲ ; ಹೆಣ್ಮಕ್ಕಳಿಗೆ 'ಸಽರ್' ಅನಬಾರದು.

**ಬಿದ್ದ —** ಹೀಗೇನ್ರಿ ! ಬಲು ತಿಪ್ಪಲ ಬಿಡ್ರಿ ಅದು. ಈಕಿ–ಈಕಿ ಅದಾಳಲ್ರಿ–ಈಕಿ ನಮ್ಮಕ್ಕನ ಮಗಳ್ರಿ. ಚೆನ್ನಿ ಅಂತಾರ್ರಿ. ನಮ್ ಯಕ್ಕಗ ಈ ಒಬ್ಬಾಕಿನಽ ಮಗಳ್ರಿ. ಮತ್ಯಾರಿಲ್ಲರಿ. ಆಕಿ ಹೇಳಿದ್ಹಾಂಗ ಕೇಳಿಕೊಂಡು ಬಾಳ್ವೆಮಾಡಽ ಮೂಳಾ ಅಂದ್ರ ಮೂಗು ತಿರಿವಿಕೊಂಡು ಮನೀ ಬಿಟ್ಟು ಮಳ್ಳೀಹಾಂಗ ಇಲ್ಲಿಗೆ ಓಡಿಬಂದಾಳು ನೋಡ್ರೀ ಗಯ್ಯಾಳಿ ! ಇಂತಾಕಿಗಿ ನೆಳ್ಳು ಕೊಡತೀರಾ ನಿಮ್ಮ ಮನ್ಯಾಗ ? ಮೊದಲ ಹೊರಗ ಹಾಕ್ರಿ. ಇಲ್ದಿದ್ರಕ ರಟ್ಟೀ ಹಿಡದು ದರದರಾ ಎಳಕೊಂತು ಹೋಕ್ಕೇನು ನೋಡ್ರಿ. ಹೇಳ್ರಿ ಗಡಾ ಏನಂತೀರಿ ?

**ಅಂ —** ಅಪಾ ಹಾಂಗೆಲ್ಲಾ ಮಾಡಬೇಡ. ಸ್ವಲ್ಪ ಸುಮ್ಮನಿರು. ಅವಳನ್ನೂ ಕೇಳೋಣು.

ಚೆ — ಯವ್ವಾ, ನಿಮ್ ಕೈಮುಗೀತೇನು, ನಾ ಎಲ್ಲಾ ಹಿಂಕಟ್ಟೆ ಹೇಳತೇನು. ಆದ್ರ ನನ್ನ ಇವನ ಕೈಯಾಗ ಮಾತ್ರ ಕೊಡಬ್ಯಾಡ್ರಿ ಯವ್ವಾ!

ಅಂ — ಅಂವ ಹಾಂಗಂತಾನ, ನೀ ಹೀಂಗಂತೀದಿ. ನೀ ಯಾಕ ಹೋಗೂದಿಲ್ಲ ಅಂತೀದಿ ಹೇಳು?

ಚೆ — ಯವ್ವಾ ಅದನ್ನ ಹ್ಯಾಗ ಹೇಳೋದ್ರೀ ತಮ್ಮಂತ ದೊಡ್ಡವರ ಹಂತ್ಯಾಕ?

ಬಿದ್ದ — ಹೌದs ಮುರಕs! ಡೋಕಾರಿ, ಏಳು ಸುಮ್ಮಾಕ. ನಡಿ ಅಂತೀನಿ.

ಅಂ — ತಡಿಯಪ್ಪಾ ತಡಿ. ಕೇಳಿ ನೋಡೋಣ ಏನಂತಾಳ. ಏನ್ ತಂಗೀ, ಏನೂ ಹೆದರಿಕೆ ಇಲ್ದ ಹೇಳು, ಯಾಕ ಒಲ್ಲೆ ಅಂತೀದಿ?

ಚೆ — ಇದ್ನೋಡ್ರಿ ನನ್ ತಾಯಿ.... (ನಾಚಿ) ಹೋಗ್ರಿ, ನನ ಗ್ಯಾಕೊ ನಿಮ್ಮೆದಿರಿಗೆ ಹೇಳಾಕ ಜೀವ ಒಲ್ಲೆ ಅಂತೈತಿ.

ಬಿದ್ದ — ಜೇಸ್ ಗತ್ತ ತಗದೀದಿ! ಹೇಳು, ಹೇಳು: 'ನನ್ ತಾಯಿ ಕಸಬತನಾ ಮಾಡತಿದ್ದಳ್ರಿ' ಅಂತ. ಅದರಾಗೇನೈತಿ.

ಚೆ — ಅಯ್ಯ, ಇದಕ್ಕಿಂತಾ ಮುಚ್ಚುಮರೀನs ಇಲ್ಲ. ಯವ್ವಾ, ನಾ ಆದನ್ನೆಲ್ಲಾ ಹಿಂಕಟ್ಟಿ ಹೇಳತೀನಿ. ಈಗ ಹ್ಯಾಗಾರ ಮಾಡಿ ಈ ಪಿಡುಗಿನ ಕೈಯಾಗಿಂದ ನನ್ನ ಉಳಿಸಿಕೊ ಯವ್ವಾ! ನಿನ್ನ ಪಾದಕ್ಕ ಬೀಳತೇನಿ.

ಬಿದ್ದ — ಹೌದ್ರೆ, ಆದಿಬುನಾದಿಯಿಂದ ನಡಕೊಂತ ಬಂದ ಕಸಬು ಹ್ಯಾಂಗ ಬಿಡಾಕ ಬರತೈತ್ರಿ? ಅಂತಾ ಕಸಬು ಬಿಟ್ಟು ಸಾಲೀ ಕಲೂತಾಳಂತ ನೋಡ್ರಿ! ಸಾಲೀ ಕಲ್ತು ಏನ್ ಮಾಡತಿದ್ದಾಳಾದೀತು? ನೀವಸರೆ ಓಟು ಬುದ್ದಿ ಹೇಳಬಾರದ್ರೆ!

ಅಂ — ಕಲಿತರ ಚಲೋ ಅಲ್ಲs?

ಬಿದ್ದ — ಯಾರಿಗೆ ಚಲೋ ಆವರಿಗೆ ಚಲೋ. ಅಲ್ರೀ, ಸಾಲೀ ಕಲ್ತು ಏನು ಕಚೇರಿಕ್ಯಾಗ ಬರಕೊಣ್ಣಾಕ ಹೋಗತಾಳ್ರಿ ಈಕಿ? ಎಂಥೆಂಥಾವ್ರೊ ದೊಡ್ಡ ಪರೀಕ್ಷಾ ಪಾಸಾಗಿ ಬಂದದವು ಕುಂತಾವು ಕೂಳು ಕಾಣದ! "ಜೆಂಟಿಲ್

ಮೆನ್" "ಜೆಂಟಿಲ್‌ಮೆನ್" ಅಂತ ಹೇಳಿಕೊಂತ. ಈ ಪಿಸಾಡಿನ್ನ ಯಾರು ಕೇಳಾತಾರ್ರೀ ? ಬಾಳಾದರ ಎಲ್ಲ್ಯಾರ ಒಂದು ಸಾಲ್ಯಾಗ ಮಾಸ್ತರಿಣಿ ಆದಾಳು. ಅದಾರಡ ಏನು ಸುಖಾ ಐತಿ, ನೂರಾರು ಮೆಂಬರ ಮರ್ಜಿ ಹಿಡಕೊಂತ ?

**ಅಂ** — ಸಾಲಿ ಕಲಿಯೋದು ನೌಕರಿ ಮಾಡಲಿಕ್ಕೇ ಅಂತ ಅಲ್ಲ. ವಿದ್ಯಾ ಕಲಿತರ ಮನಸ್ಸು ಸುಧಾರಸತದ. ಒಳ್ಳೇದು ಯಾವುದು ಕೆಟ್ಟದು ಯಾವುದು ತಿಳೀತದ.

**ಬಿದ್ದ** — ಯುವ್ವಾ, ಸಿಟ್ಟಿಗೇಳಬ್ಯಾಡ್ರಿ ; ಕರೇ ಹೇಳ್ತೀನು. ನೀವು ಹೇಳಿದಿರೆಲ್ಲ, ಕಲ್ತರ ಅವೇನೇನೊ ಆಕ್ಕೈತಿ ಅಂತ. ಅದೆಲ್ಲ ಸುಳ್ಳು ನೋಡ್ರಿ. ಆ ಕಲ್ಕಿ ಎಲ್ಲಾ ಏನು ಗೊತ್ತೈತೇನ್ರಿ ? ಕಲೀದ ಇದ್ದವರ್ನ ತಿಳೀದ ಟೊಪಿಗಿ ಹಾಕೊ ಕಣ್ಕಟ್ಟು ಯುವ್ವಾ ಅದು. ಹೊರಗಡಟ ಥಳಕು. ಒಳಗೇನೈತ್ರಿ ? ಭುರ್‌ಭುಶ್ !

**ಚೆ** — ಯುವ್ವಾ, ಇಂವ ಯಾವಾಗೂ ಹೀಗಡ ನೋಡ್ರಿ. ನಾ ಸಾಲೀ ಕಲ್ತು ಎಲ್ಯಾರ ಮರುವಾದಿಯಿಂದ ಬಾಳೀವು ಮಾಡಬೇಕು ಅನ್ನುವಾಕಿ. ಇಂವ ಅದು ಬ್ಯಾಡಾ ಅನ್ನೋವ. ಈ ಬಿಕನಾಸಿಗೆ ಏನು ತಿಳೀತಿದ್ದೀತ್ರಿ ಯುವ್ವಾ ?

**ಬಿದ್ದ** — ಎಲೆ, ಹಾಗ ಹೀಗ ಮಾತಾಡಬ್ಯಾಡ, ಬಾಯಾಗಿನ ನಾಲಿಗಿ ಕಿತ್ತೇನು ! ಅಲ್ಲ, ಭಾಳ ಡೌಲು ಮಾಡಿ ಹೇಳತೀ, ಮುಂಜಾನಿಂದ ಚೆಂಜೀಮಟಾ ದುಡದರ ನಾಲಕ್ಕಾಣೆ ಕೂಲಿ ಸಿಗಬೇಕಾದರ ಯುವ್ವಾ ಯುಪ್ಪಾ ನೆಪ್ಪಾಗಿ ಹೋಕ್ಕಾರು. ಅಟರಿಂದ ಏನಾಗತೈತಿ ಮತ್ತ ? ಹೊಟ್ಟೆ ತುಂಬ ಕೂಳಡ? ಮೈತುಂಬ ಅರಿವೇ ? ಎನ್ನೈತಿ ?

**ಅಂ** — ಅಲ್ಲಪ್ಪಾ, ಇಷ್ಟೊತ್ತಾತು ನಾನೂ ಕೇಳಲಿಲ್ಲ, ನೀನೂ ಹೇಳಲಿಲ್ಲ. ನಿನ್ನ ಹೆಸರರೆ ಏನು ?

**ಬಿದ್ದ** — ಹೌದಲ್ರೆ. ಬಿದ್ದಾಡಿ ಅಂತಾರ್ರಿ.

**ಅಂ** — ಬಿದ್ದಾಡೆಪ್ಪಾ, ಇಲ್ಲಿ ಕೇಳು. ಯಾವದಕ್ಕೂ ಆಗಲಿ, ಮನಸ್ಸು ಒಪ್ಪದ ಕೆಲಸ ಮಾಡೂ ಅಂತ ಹೀಂಗ ಜುಲುಮಿ ಮಾಡೋದು ತಪ್ಪು. ಈ ಜೀವನಕ್ಕ ಒಂದು ನೈತಿಕ ಬಂಧನ ಇರದಿದ್ದರ ಸೂತ್ರ ಹರಿದ ಗಾಳೀಪಟ ಇದ್ದಾಂಗ ಅದು.

**ಬಿದ್ದ** — ಹೂಂ, ನಾನೂ ಅನ್ನೂದು ಇದನ್ನೂ. ಆದರ ನಮ್ಮ ಗಾಳೀಪಟಕ್ಕಿರೋ ಸೂತ್ರ ದುಡ್ಡಿನ ಸೂತ್ರ ಯವ್ವಾ. ಇಡೀ ಜಗತ್ತೂ ಈ ಸೂತ್ರದ ಮ್ಯಾಗ ನಡದೈತಿ, ಅಂಬೋದೇನು ನಿಮಗೆ ಗೊತ್ತಿಲ್ರೀ ? ನಿಮಗ ಹೇಳೋದೈತ್ರೀ ? ಮತ್ತ ದುಡ್ಡು ಬರೋದು ಈ ಕಸಿಬಿನಾಗ. ಪದ ಕೇಳಿಲ್ರಿ?

**ರಾಗ :** ಮಧ್ಯಮಾವತಿ **ತಾಳ :** ಅಟ

ರೊಕ್ಕವು ಇರದಿರೆ ಬಡತನವಕ್ಕ ।
ಬೊಕ್ಕಬಡತನ ತಾ ಮೂಲ ಪಾಪಕ್ಕ ।। ಪ. ।।
ಮನವಾಗಲೊಮ್ಮೆ ಲಜ್ಜೆಯು ಪೋಪುದಕ್ಕ ।
ಘನಲಜ್ಜೆ ಬಿಡಲಪ್ಪ ಹಳವಿಂಗೆ ತಕ್ಕ ।
ಹಳಿವ ಲೆಕ್ಕಿಸದೊಡೆ ಮತಿ ನಾಶಕ್ಕ ।
ತಿಳಿ ಮತಿಯಳಿಯಲು ಪತಿತನಕ್ಕಕ್ಕ ॥

**ಅಂ** — ದುಡ್ಡು ಬರತದ ಅಂತ ಅಲ್ಲದ ಕೆಲಸಾ ಮಾಡಬಾರದು ಬಿದ್ದಾಡೆಪ್ಪಾ. ( ಕುರ್ಚಿಯ ಮೇಲೆ ಬಂದು ಕೂಡುತ್ತಾ ) ಇರಲಿ, ನಿಮ್ಮ ತಂದೆ ಯಾವ ಕೆಲಸ ಮಾಡತಿದ್ದರು ?

**ಬಿದ್ದ** — ನನಗ ಗೊತ್ತಿಲ್ಲರಿ. ನಾ ಸಣ್ಣಾವ ಇರತ ಸತ್ತನಂತರಿ. ಅವ ಸತ್ತಮ್ಯಾಗ ಹೊಟ್ಟಿ ತುಂಬಿಕೊಣ್ಣಾಕ ದಾರಿಗಾಣದ ನಮ್ ತಾಯಿ—ಆಗಿನ ಜಗತ್ತೂ ಹಾಗಿತ್ತರಿ—ಕಸಬತನಾ ಮಾಡಿದಳ್ರಿ.

**ಅಂ** — ನಿಮ್ಮ ತಾಯಿ ಇದ್ದಾಳೇನು ಈಗ ?

**ಬಿದ್ದ** — ಇಲ್ಲರಿ.

**ಅಂ** — ಭಾಳ ದುಡ್ಡು ಗಳಿಸಿರಬೇಕಲ್ಲ ?

**ಬಿದ್ದ** — ಗಳಿಸಿದ್ದಳ್ರಿ. ಆದರ ಗಳಿಕಿ—ಬಳಿಕಿ ಸಮಾ ಆಗಿ ಎಲ್ಲಿದ್ದೆವೋ ಅಲ್ಲಿಗೇ ಬಂದು ಮುಟ್ಟೆದಿವ್ರಿ. ಭಾಳ ರೊಕ್ಕಾ ಆಕೀ ಬ್ಯಾನೀನೂ ನುಂಗಿತರಿ.

**ಅಂ** — ನಿಮ್ಮ ಅಕ್ಕ ?

**ಬಿದ್ದ** — ನಮ್ಮ ಅಕ್ಕನೂ ಹಾಗಽರಿ. ರೊಕ್ಕ ಏಟ ಬಂದರೂ ಈಡಽ ಆಗವಲ್ಲದರಿ. ಬ್ಯಾನೀ ಬಾಯಿಗೇ ಹೋಕ್ಕೈತರಿ.

**ಅಂ** — ಬಿದ್ದಾಡೆಪ್ಪಾ, ಖರೇ ಹೇಳು, ಹೀಗಿರೋದು ನಿನ್ನ ಒಳಗಿನ ಮನಸ್ಸಿಗೆ ಬರಾಬರಿ ಅನಸತದೇನು ?

**ಬಿದ್ದ** — ಬರಾಬರಿ ಅಲ್ಲಾ ಅಂತ ಅನಸತಿರತೈತಿ. ಆದರ ಕೇಳೋವರು ಯಾರು ? ಜಗತ್ತಽ ಹಾಗೈತಿ, ಹಾಗ ಇರು ಅಂತೈತಿ.

**ಅಂ** — ಬಿದ್ದಾಡೆಪ್ಪ ಇಲ್ಲಿ ಕೇಳು. ನೀಯೇನು ತಿಳಿವಳಿಕಿ ಇಲ್ಲದ ಮನುಷ್ಯ ಅಲ್ಲ. ವಿಚಾರಮಾಡು. ನೀ ಈಗ ಯಾವ ಉದ್ಯೋಗ ಮಾಡತೀ ?

**ಬಿದ್ದ** — ನಾವ್ರೆ ? ಬಿಚ್ಕ್ಯಾನಾಥರಾಯರ ಹಾಫೀಶಿನಾಗ ಸೆರ್ವಂಟ್ ಆದೀವಿ, ಸೆರ್ವಂಟ್. ಇಪ್ಪತ್ತು ರೂಪಾಯಿ ಸಂಬಳ.

**ಅಂ** — ಹಾಂಗಿದ್ದರ, ಹೀಂಗ್ಯಾಕ ಮಾಡಬಾರದು ಬಿದ್ದಾಡಿಯಪ್ಪ?

**ಬಿದ್ದ** — ಹ್ಯಾಗರಿ ?

**ಅಂ** — ನೀನಽ ಈ ಹುಡಿಗಿನ್ನ ಮದಿವಿ ಆಗಿಬಿಡು.

**ಬಿದ್ದ** — ಏನಂದಿರಿ ? ಈಕಿನ್ನರೇ ! ಮದಿವಿಮಾಡಿಕೊಣ್ಣೋದ್ರೆ ? ನಮ್ಮಿಂದ ಆಗದ ಮಾತು ತಗೀರಿ. ಹೇಳಿ ಕೇಳಿ ಕಸಬೀ ಮಗಳು !

**ಅಂ** — ಮತ್ತ ನೀನು ?

**ಬಿದ್ದ** — ಆ–ಆ–ವು ಮ– ( ತತ್ತರಿಸುವನು )

**ಅಂ** — ಇಲ್ಲಿ ನೋಡು ಬಿದ್ದಾಡೆಪ್ಪ, ಸಿಟ್ಟಿನಾಗಿದ್ದಾಗ ಒಮ್ಮೆಲೆ ದುಡಿಕಿ ಏನಾದರೂ ಮಾಡಿಬಿಡಬಾರದು. ಆ ಸಿಟ್ಟಿಗೆ ಹೋಗಲಿಕ್ಕೆ ಒಂದಿಷ್ಟು ದಾರಿ ಬಿಟ್ಟು ನಿಂತು ಅಲ್ಲಿಂದ ಮತ್ತ ಮುಂದೆ ನಡೀಬೇಕು. ಈಗ ಹೀಂಗ ಮಾಡು. ಈಕಿ ಕೆಲವು ದಿನ ಇಲ್ಲೇ ಇರಲಿ. ನಿಮ್ಮ ಅಕ್ಕಗ ಹೋಗಿ ಎಲ್ಲಾ ಹೇಳಿ ವಿಚಾರಮಾಡಿಕೊಂಡು ಬಾ.

**ಬಿದ್ದ** — ತಿಳಿದವರು ಹೇಳತೀರಿ ಅಂದಮ್ಯಾಗ ಹಾಗಽ ಮಾಡತ್ತೇನು.

ಆದರ ಅಲ್ಲೀ ಮಟ ಹೊಂಗ ಮಾತ್ರ ಬಿಡಬ್ಯಾಡ್ರಿ ಈ ಹೆಣ್ಣಿನ್ನ. ಬಲು ಮೂಬೆರ್ಕಿ ಐತಿ ಅದು. ಬರ್ತೇನ್ರಿ ಹಾಂಗರs.

[ ದುರುದುರು ಚೆನ್ನಿನ್ನ ನೋಡುತ್ತ ಹೋಗುವನು ]

**ಅಂ** — ಚೆನ್ನಮ್ಮಾ, ಇಲ್ಲಿ ಬಾ. ಕೂತ್ಕೊ.

[ ಬಂದು ಪಾದದಡಿಯಲ್ಲಿ ಮುದುಡಿಕೊಂಡು ಕೂಡುವಳು ]

ಇಷ್ಟೊತ್ತಿನ ಮಾತು ಎಲ್ಲಾ ಕೇಳಿದಲ್ಲಾ ?

**ಚೆ** — ಹೂಂನ್ರಿ ಯವ್ವಾ.

**ಅಂ** — ಇದು ನೋಡು, ನೀನು ನಿನ್ನ ಹೆಸರಿಗೆ ತಕ್ಕಂಗ ನಡೆದುಕೋಬೇಕಿನ್ನು. ನಿಮ್ಮ ಮಾವನನ್ನೂ ತಿದ್ದಬೇಕು; ನಿನ್ನನ್ನೂ ತಿದ್ದಿಕೋಬೇಕು. ನಿನ್ನ ಮ್ಯಾಲ ಅದ ನೋಡು ಎಲ್ಲಾ.

**ಚೆ** — ಎಂತಾ ಮಾತರಿ ಯವ್ವಾ ! ಉಡ್ಯಾಗ ಬಿದ್ದಾಕಿನ್ನ ಬೆನ್ನಿಗೆ ಕಟ್ಟಿಕೊಂಡು ಮರುವಾದಿ ಉಳಿಸಿ ಕಾಯ್ದಿರಿ ಹಡದವ್ವಾ. ಈ ಉಪಕಾರಾನ ಎಂದೂ ಮರೆಯಾಕಿಲ್ಲ. ನಿನ್ನ ಕಾಲಾಗಿನ ಮೆಟ್ಟು ಆಗ್ಯಾರ ತೀರಸತೀನಿ ತಾಯಿ !

**ಅಂ** — ಹಾಂಗೆಲ್ಲ ಹೆಳಬಾರದು ಚೆನ್ನಮ್ಮಾ. ದಿನ ಬೆಳಗಾದರ ನಮ್ಮ ಕಾಲ ಕೆಳಗ ತುಳಿಯೋ ಈ ಭೂಮಿತಾಯಿ ನಮ್ಮನ್ನೆಲ್ಲಾ ತನ್ನ ಮೈ ಮ್ಯಾಲ ಕರಕೊಂಡು ಆಡಿಸಿ, ನಮ್ಮ ಹೊಟ್ಟಿಗೆ ಹಾಕತಾಳಲ್ಲ, ಆಕಿ ತಿರಿಗಿ ನಮ್ಮಿಂದ ಏನಾದರೂ ಬೇಡತಾಳೇನು ? ಇಲ್ಲ.

[ ಎದ್ದು ಹೋಗಿ ರೇಡಿಯೊ ಹಚ್ಚಿಬಂದು ಮಂಚದ ಮೇಲೆ ಕುಳಿತುಕೊಳ್ಳುವಳು ]

[ ರೇಡಿಯೊದಿಂದ ಬರುವ ಹಾಡು ]

ತನುವ ಮಾರಿ ಜೀವಿಪ ವನಿತೆಗೆ ಪತಿತಳೆನಲೆ, ಮನವ
ಮಾರಿದ ನರಗೆ ಪತಿತನೆನಲೆ ?
ಜನುಮವ ಹೀನಕುಲದಿ ತಳೆದಗೆ ಪತಿತನೆನಲೆ, ಗುಣವಿಲ್ಲದ
ಕುಲಜಗೆ ಪತಿತನೆನಲೆ ! ॥

ಜನಹಿತವಂಗೈವ ಹೊಲೆಯಗೆ ಪತಿತನೆನಲೆ, ಮನೆಯುವರ
ಠಕ್ಕರಗೆ ಪತಿತನೆನಲೆ ?

ಜಸುರಾಂದ ನಾಡಸುಡಿ ಹೇವ ಬಿಡೆ ಪತಿತರೆನಲೆ, ತನತು
ಧರ್ಮವ ತೊರೆದವಗೆ ಪತಿತನೆನಲೆ ॥

[ ಹಾಡು ಮುಗಿಯುವ ಹೊತ್ತಿಗೆ ಮಲ್ಲಿನಾಥನೂ ಏಬ್ರಾಂನೂ ಸರ್ವೋತ್ತಮ ನನ್ನು ಹೊತ್ತುಕೊಂಡು ಬರುತ್ತಾರೆ ]

ಮ — ಅಂಜನಾ, ಆ ಹಾಸಿಗೆ ಸರಿಮಾಡು; ಬೇಗ; ಬೇಗ.

ಅಂಜನಾ ಗಡಿಬಿಡಿಯಿಂದ ಓಡಿ ಹೋಗಿ ಹಾಸಿಗೆ ಸರಿಮಾಡುವಳು. ಸರ್ವೋತ್ತಮ ನನ್ನು ಮಲಗಿಸಿ, ಒಂದು ಮಗ್ಗಲಿಗೆ ಮಲ್ಲಿನಾಥ, ಇನ್ನೊಂದು ಮಗ್ಗಲಿಗೆ ಏಬ್ರಾಂ ನಿಂತುಕೊಳ್ಳುವರು. ಏಬ್ರಾಂ ಅವನ ಹೃದಯವನ್ನು ಪರೀಕ್ಷಿಸುವನು. ಅಂಜನಾ ತಲೆಯ ಕಡೆಗೆ ನಿಂತಿರುವಳು. ಚೆನ್ನಿ ದೂರದಲ್ಲಿರುವಳು. ]

ಏ —( ಸ್ಟೆಥೊಸ್ಕೋಪನ್ನು ತೆಗೆದು ಕೈಯಲ್ಲಿ ಹಿಡಿದು ) Thank God ! ಇನ್ನೇನೂ ಚಿಂತೆ ಇಲ್ಲ. ಈ ತರುಣನು ಏಸುವಿನ ಕೃಪೆಯಿಂದ ಪಾರಾದನು!

ಮ — ಜೀವಕ್ಕೇನೂ ಅಪಾಯ ಇಲ್ಲವಷ್ಟೆ ?

ಏ —ಇಲ್ಲ. ತನ್ನ ನಿಜವಾದ ಭಕ್ತರನ್ನು ನಮ್ಮ ದೇವರ ಮಗನಾದ ಏಸುವು ಸಂರಕ್ಷಿಸುತ್ತಾನೆ. ಇವನಿಗೆ ಸ್ವಲ್ಪ ವಿಶ್ರಾಂತಿ ಬೇಕು. ಅಂದರೆ ಬೇಗನೆ ಹುಷಾರಾಗುವನು.

ಮ — ಬಿಸಿಬಿಸಿ ಏನನ್ನಾದರೂ ಕೊಡಬಹುದೇ ಡಾಕ್ಟರ್ ಈಗ?

ಏ — ಈಗ ಬೇಡ. ಸ್ವಲ್ಪಹೊತ್ತಿನಲ್ಲಿಯೆ ಇವರಿಗೆ ಮತ್ತೆ ಎಚ್ಚರ ಬರುವದು. ಆಗ ಸ್ವಲ್ಪ ಬಿಸಿಬಿಸಿ ಟೀ ಕೊಡಿರಿ.

[ಮಂಚದಿಂದ ಸ್ವಲ್ಪ ದೂರ ಸರಿದು ಇಬ್ಬರೂ ಕುಳಿತುಕೊಳ್ಳುವರು ]

ಅಂ — ( ಮಲ್ಲಿನಾಥ ಕುಳಿತಲ್ಲಿ ಬಂದು ಮೆಲ್ಲನೆ ಕಿವಿಯಲ್ಲಿ ) ಮಾಮಾ, ಮಧ್ಯಾನ್ಹದಾಗ ಒಬ್ಬ ಹೊಲೆಯನ ವಿಷಯ ಹೇಳಿದೆನಲ್ಲಾ, ಆವಗ ಸಹಾಯಮಾಡಿದ ಗೃಹಸ್ಥರು ಇವರೇ ನೋಡು. ಏನಾಗಿತ್ತು ?

ಮ — (ಏಳುತ್ತ) ಡಾಕ್ಟರ್, ನಾ ಒಳಗೆ ಹೋಗಿ ಬಟ್ಟೆ ಬದಲಾಯಿಸಿ ಕೊಂಡು ಬರತೇನಿ. (ಅಂಜನೆಗೆ) ನಾನೂ ಡಾಕ್ಟರೂ ದಿನದ ವಾಕಿಂಗ್ ಹೋದಾಗ ನಮ್ಮ ಮನೆಯ ಮಗ್ಗಲ ತೋಟದ ಭಾವಿಯೊಳಗೆ ಒಮ್ಮೆಲೆ

ಯಾರೋ ಬಿದ್ದ ಸಪ್ಪಳ ಕೇಳಿಸಿತು. ಓಡಿ ಹೋಗಿ ನೋಡಿದಾಗ ಇವರು ಸಿಕ್ಕರು. ಡಾಕ್ಟರ್ ಇದ್ದರೂ ಅಂತ ಎಲ್ಲಾ ನೆಟ್ಟಗಾಯಿತು. ಬದುಕಿದರು. ಚೆನ್ನಿ ದೂರದಲ್ಲಿ ನಿಂತಿರುವದನ್ನು ನೋಡಿ) ಅಂಜನಾ, ಈಕಿ ಯಾರು ?

**ಅಂ —** ಈಕಿ ಚೆನ್ನವ್ವ.

**ಮ —** ಇಲ್ಲಿಗೆ ಯಾಕ ಬಂದಿದ್ದಳು ? ಏನು ಕೆಲಸಿತ್ತು ?

**ಅಂ —** ಅದನೆಲ್ಲಾ ನಾ ಹಿಂದಾಗಡೆ ನಿನಗೆ ಹೇಳತೇನಿ. ಬಟ್ಟೆ ಬದಲಾಯಿಸಿಕೊಂಡು ಬಾ. ನಾನೂ ಹೋಗಿ ಚಹಾಕ್ಕಿಟ್ಟು ಬರತೇನಿ.

[ ಮಲ್ಲಿನಾಥ ಅಂಜನಾ ಬೇರೆ ಬೇರೆ ಕಡೆಗೆ ಹೋಗುವರು ]

**ಏ —** ( ಸರ್ವೋತ್ತಮನ ಹತ್ತಿರ ಕುರ್ಚಿ ಎಳೆದು ಕುಳಿತುಕೊಂಡು, ಅವನನ್ನು ನಿರೀಕ್ಷಿಸುತ್ತ ಮೈಮೇಲೆ ಕೈಯಾಡಿಸುತ್ತ ) ಏಳಬೇಡ; ಆಕಾಶದಲ್ಲಿರುವ ನಮ್ಮ ಏಸುವಿನ ಮಹಿಮೆಯುಳ್ಳ ತಂದೆಯನ್ನು ಸ್ಮರಿಸು; ಶಾಂತಿಯನ್ನು ಪಡೆ.

**ಸ —** (ನರಳುತ್ತ) ಆssss....ಏ ...ನಿ....ದು ? ನಾ....ಎ....ಲ್ಲಿ....ದ್ದೇ....ನೆ ? ನಾ....ನು....ಬದುಕಿರುವೆನೇ ?........ (ಚೆನ್ನಿಯ ಕಡೆಗೆ ನೋಡಿ) ಇ-ವ-ಳಾ-ರು ? ಆ-ಆ-ಆ-ಕೆ ....ಏನು ? ....ಹಾಂss........

**ಏ —** (ಮೈಮೇಲೆ ಕೈಯಾಡಿಸಿ) ತರುಣನೆ ಹೆದರಬೇಡ. ನಿಮ್ಮನ್ನು ಸಾಕುವ ಆ ಪರಲೋಕದ ತಂದೆಯನ್ನು ಪ್ರಾರ್ಥಿಸು.

**ಸ —** ನಾ....ನು....ಮತ್ತೂ ಬದುಕಿವೆನೇ ! ಅಯ್ಯೋ ! .... ... ( ಕಣ್ಣುಮುಚ್ಚುವನು )

**ಏ —** ಇವನಿಗೆ ಮತ್ತೆ ಮೂರ್ಛೆ ಬಂತು. (ಚೆನ್ನಿಯ ಕಡೆಗೆ ನೋಡಿ) ಸ್ವಲ್ಪ ನೀರು ಬೇಕು.

[ ಚೆನ್ನಿ ಓಡಿಹೋಗಿ ಅಂಜನೆಗೆ ಹೇಳುವಳು. ಆಕೆ ತಂದು ಕೊಡುವಳು. ಮುಖಕ್ಕೆ ನೀರು ಸಿಂಪಡಿಸುವನು ]

**ಸ —** ಹಾಂ....ಓಮ್ಮೆ....ಗೆದ್ದೆ.... ( ಏಳಲು ಪ್ರಯತ್ನಿಸುವನು )

[ ಮಲ್ಲಿನಾಥನು ಬರುವನು ]

**ಮ —** ತಡೆಯಿರಿ, ತಡೆಯಿರಿ. ಹಾಗೆ ಏಳಲಿಕ್ಕೆ ಹೋಗಬೇಡಿರಿ.

ಮಲಗಿದಲ್ಲಿಯೆ ಮಲಗಿಕೊಳ್ಳಿರಿ ಕೆಲಹೊತ್ತು. ಈಗ ಚಹಾ ಬರುವದು. ಕುಡಿದರೆ ಆರಾಮು ಆದೀತು. ಅಂಜನಾ !

[ ಅಂಜನಾ ಚಹಾ ತಂದು ಕೊಡುವಳು. ಸರ್ವೋತ್ತಮ ಅವಳ ಮುಖವನ್ನೇ ನೋಡುತ್ತ ಚಹಾ ಕುಡಿಯುದಿರುವನು ]

ಚಹಾ ತೆಗೆದುಕೊಳ್ಳಿ (ಎಚ್ಚರಿಸುವನು)

[ ಚಹಾ ತೆಗೆದುಕೊಳ್ಳುವನು ]

ಈಗ ಆರಾಮೆನಿಸುತ್ತದೋ ? ತಾವು ಇಲ್ಲಿ ಯಾವದಕ್ಕೂ ಸಂಕೋಚ ಮಾಡಿಕೊಳ್ಳಬಾರದು. ಇಲ್ಲಿರುವವರೆಲ್ಲರೂ ತಮ್ಮವರೇ.

**ಸ** — ( ಎಲ್ಲರನ್ನೂ ನೋಡಿ ) ಸಾಯುವ ನನ್ನನ್ನು ಯಾಕೆ ಬದುಕಿಸಿದಿರಿ ? ಬದುಕಿಸಿ ನನ್ನನ್ನು ಕೊಂದಿರಿ. ನನ್ನಿಂದೇನಾಗಬೇಕಾಗಿದೆ ? ಜಗತ್ತಿಗೆ ನಾನು ಭಾರ.... ನಿರುಪಯೋಗಿ....( ಬಿಕ್ಕಿಬಿಕ್ಕಿ ಅಳುವನು )

**ಮ** — ಹಾಗೆ ಧೃತಿಗೆಡಬಾರದು. ಬದುಕು ಸಾವಲ್ಲ. ಬದುಕಿಗೆ ಅಂಜಿ ಸಾವಿಗೆ ತೆಕ್ಕೆಬೀಳಬಾರದು. ಅಂಥಾ ಪ್ರಸಂಗವಾದರೂ ಏನು ಬಂದಿತ್ತು ?

**ಸ** — ಒಲ್ಲೆ, ಒಲ್ಲೆ. ಅದನ್ನು ಹೇಳುವದಕ್ಕೆ ನನ್ನಿಂದಾಗದು.

**ಮ** — ಅಂತಹ ಗುಟ್ಟೇನಾದರೂ ಇದ್ದರೆ ಅದರ ದುರುಪಯೋಗ ಮಾಡಿಕೊಳ್ಳುವಂಥವರಾರೂ ಇಲ್ಲಿ ಇಲ್ಲ ( ಡಾಕ್ಟರ ಕಡೆಗೆ ನೋಡುವನು )

**ಏ** —(ಇಲ್ಲ ಎಂದು ತಲೆ ಹಾಕಿ) ನಿಮ್ಮ ತಪ್ಪುಗಳನ್ನೊಪ್ಪಿಕೊಂಡರೆ ಪರಲೋಕದ ತಂದೆಯು ಕ್ಷಮಿಸುವನು; ಮತ್ತು ನಿಮ್ಮನ್ನು ಸಾಕುವನು.

**ಸ** — ಏನೋ ವಿರಸ ಬಂತು ತಂದೆಗೂ ನನಗೂ. ಅದೊಂದು ವಿಷದ ಗಳಿಗೆ ಎನ್ನಬೇಕು. ನನ್ನ ಮನಸ್ಸು ಓಡುವ ದಿಕ್ಕು ಬೇರೆ; ಅವರದು ಬೇರೆ. ಮಹಾತ್ಮರು ನಡೆದ ದಾರಿಯಲ್ಲಿ ನಡೆಯಬೇಕೆಂದು ಒಳಗಿನ ಆಶೆ. ಅವರು ಹೇಳಿದ ಮಾತು ಈ ಜೀವಕ್ಕೆ ಹಿತ ಎನಿಸಿದವು. ಅವನ್ನೇ ನಂಬಿ ಅತ್ತ ನಡೆದೆ. ಅದೇ ತಂದೆಯವರಿಗೆ ಕಹಿಯಾಯಿತು. ಅವರದು ಬೇರೆ ಪ್ರಕೃತಿ. ಅವರು ಬೆಳೆದುಬಂದದ್ದು ಬೇರೆ ಕಾಲ. ಅವರ ಆಶೆ-ಆಕಾಂಕ್ಷೆ ಬೇರೆ.

ನಾನು ಮಾಡಿದ್ದೆಲ್ಲಾ ಅವರಿಗೆ ಅವಿವೇಕವಾಗಿ, ಅಧರ್ಮವಾಗಿ ಕಾಣುತ್ತದೆ. ನೌಕರಿ ಮಾಡುವದೇ ಅವರ ಜೀವನಸರ್ವಸ್ವ. ಅದನ್ನೇ ನಂಬಿ ಬಂದವರು. ಅದಿಲ್ಲಾ ಎಂದ ಕೂಡಲೆ ಅವರು ಕಟ್ಟಿದ ಆ ಕಲ್ಪನಾಮಂದಿರವೇ ಕುಸಿದು ಬಿದ್ದಂತನಿಸುತ್ತದೆ ಅವರಿಗೆ. ಅದಕ್ಕೇ ಅವರು ಗಾಬರಿಯಾಗುತ್ತಾರೆ. ನೆಲೆ ತಪ್ಪಿದವರಂತೆ ಒದ್ದಾಡುತ್ತಾರೆ. ನಮ್ಮದು ಅವರಿಗೆ ಅವ್ಯವಹಾರ್ಯವಾಗಿ ಕಾಣುತ್ತದೆ; ಅವಿವೇಕವಾಗಿ ಪರಿಣಮಿಸುತ್ತದೆ. ಈ ಶಿಕ್ಷಣದ ಪರಿಣಾಮದಿಂದಲೋ ಏನೋ ನನಗೂ ಒಮ್ಮೊಮ್ಮೆ ಆಶ್ಚರ್ಯ ಬರುತ್ತದೆ. ಇಷ್ಟು ಕಲಿತೂ ಸ್ವತಂತ್ರವಾಗಿ ಹೊಟ್ಟೆ ತುಂಬಿಕೊಳ್ಳುವ ತ್ರಾಣ ಬರಲಿಲ್ಲವಲ್ಲಾ ಅಂತ ಅತಿ ನಿರಾಸೆ ನನ್ನಲ್ಲಿ ತುಂಬುತ್ತದೆ. ಇಂತಹ ಭಾವನೆ ಬಂದಾಗಲೇ ಈ ಕೆಲಸಕ್ಕೆ ಕೈಹಾಕಿದೆ.

ಏ — ಓ! ಇಷ್ಟಕ್ಕಾಗಿ ತಾವು ಎಂಥಾ ಅಪಾಯಕ್ಕೆ ಕೈಹಾಕಿದಿರಿ! ನಿಮಗೆ ನೌಕರಿ ಬೇಕಾಗಿದ್ದರೆ ಹೇಳಿರಿ, ನಾನು ಕೊಡಿಸುತ್ತೇನೆ. ಮುಂಬೈಯಲ್ಲಿ ನಮ್ಮ ಹಿರಿಯ ಸಾಹೇಬರಿದ್ದಾರೆ; ಅವರಿಗೆ ಬರೆದು ನಿಮಗೆ ತಕ್ಕಂಥ ನೌಕರಿ ಕೊಡಿಸುತ್ತೇನೆ. ಆ ನಮ್ಮ ಏಸುವು....

ಸ — ಆಽಽಽ ನನಗೇಕೊ ಉಸಿರು ಕಟ್ಟಿದಂತಾಗುತ್ತದೆ.....ಹಾ.... ಅವ್ವಾ! .... ( ಮತ್ತೆ ಕಣ್ಣು ಮುಚ್ಚುವನು )

ಏ — ( ಮಲಗಿಸಿ ) ಏನೂ ಚಿಂತಿಸುವ ಕಾರಣವಿಲ್ಲ. ಇಷ್ಟು ಮಾತಾಡಬಾರದಿತ್ತು. ಸ್ವಲ್ಪ ಗಾಳಿ ಹಾಕಬೇಕು....

ಮ — ಅಂಜನಾ, ಬೇಗನೆ ಬೀಸಣಿಕೆ ತೆಗೆದುಕೊಂಡು ಬಾವ್ವಾ.

[ ಅಂಜನಾ ಬೀಸಣಿಕೆ ತರುವಳು ]

ಸ್ವಲ್ಪ ಗಾಳಿ ಹಾಕು. ಡಾಕ್ಟರ್, ಮೇಲಿಂದ ಮೇಲೆ ಹೀಗೇಕೆ ಆಗುತ್ತಿರಬೇಕು?

ಏ — 'ಶಾಕ್'ದಿಂದ ಹಾಗೆ ಆಗುತ್ತದೆ. ಒಮ್ಮೊಮ್ಮೆ Music gives wonderful soothing effect.

ಅಂ — ರೇಡಿಯೋ ಹಚ್ಚಬಹುದೇನು ಹಾಗಾದರೆ?

ಮ — ಈ ರೇಡಿಯೋದಿಂದ ಎಂಥಾ ಸಂಗೀತ ಬರತದೋ ಏನೊ

ಇವೇ ಭಯ. ಒಮ್ಮೊಮ್ಮೆ ಅದನ್ನ ಕೇಳಿದರs Sensless ಆಗಬಹುದು. ಅಂಜನಾ, ನೀನೇ ಏನಾದರೂ ಒಂದು ಹಾಡುತ್ತಿಯೇನು ನೋಡು.

**ಅಂ —** ಹಚ್ಚಿಯಂತೂ ನೋಡೋಣು. ಬೇಡಾದರ ಬಂದುಮಾಡಿ ಹಾಡಲಿಕ್ಕೆ ಬಂದೇ ಬರುತ್ತದೆಯಲ್ಲ.

[ ರೇಡಿಯೋ ಹಚ್ಚುವಳು ]

[ ರೇಡಿಯೋದಿಂದ ಬರುವ ಹಾಡು ]

ತಲ್ಲಣವಗೊಳ್ಳದಿರು ಎಲೆ ಮಾನವ ।
ಕೊಳ್ಳು ಶಾಂತಿಯ ಸ್ವಾಮಿ ರಕ್ಷಿಸುವ ನಿನ್ನ ॥ ಪ ॥
ಅಡವಿಯೊಳಗಾಡುವ ಮೃಗಜಾತಿ ಪಕ್ಷಿಗೆ ।
ಅಡಿಗಡಿಗೆ ಆಹಾರವಿತ್ತವರು ಯಾರೋ ॥
ಪಡೆದ ಜನನಿಯ ತೆರದೆ ಸ್ವಾಮಿ ಹೊಣೆಗಾರಾಗಿ ।
ಬಿಡದೆ ರಕ್ಷಿಸುವನಿದಕೆ ಸಂದೇಹ ಬೇಡ ॥

**ಸ —** (ಏಳುತ್ತ) ಆಹಹಾ ! ಏನು ದರ್ಶನ ಇದು ! ಎಷ್ಟು ಅಭಯ ದಾನವಿದೆ ಇದರಲ್ಲಿ !....

**ಮ —** ಏಳಬೇಡಿರಿ. ಹಾಗೆ ಮಲಗಿರ್ರಿ. ಬಹಳ ಮಾತು ಬೇಡ.

[ ಹೊರಗೆ ಬಾಗಿಲು ಬಡಿದ ಸದ್ದು ]

ಚೆನ್ನವ್ವಾ ಬಾಗಿಲು ತೆರೆದು ಬಾ.

[ ಹೋಗಿ ಬಾಗಿಲು ತೆರೆದು ಬರುವಳು ]

[ ಕನಕರಾಯ, ಧವಳಾಬಾಯಿ ಬರುವರು

**ಧ —** ( ಸರ್ವೋತ್ತಮನೆಡೆಗೆ ಧಾವಿಸುತ್ತ ) ಸರೂ, ಸರೂ ! (ತಲೆಯ ಮೇಲೆ ಕೈಯಾಡಿಸುತ್ತ ) ಏನಾಗಿತ್ತಪ್ಪ ನಿನಗ ? ನಿನಗೇನು ಅಂಥಾದ್ದು ಬಂದಿತ್ತಪ್ಪಾ ಹೀಂಗ ಮಾಡ್ಲಿಕ್ಕೆ ? ಸಾಯುವಂಥಾದು ಏನು ಬಂದಿತ್ತು ನಿನಗ, ನಾ ಇರೋತನಕಾ ? ಹಾಂಗ ಮಾಡಬಾರದಪ್ಪಾ (ಅಂಜನೆಗೆ) ನೀ ನನ್ನ ಮಗಳ ಹಾಂಗ ಏನವಾ ; ನಿಮ್ಮೆಲ್ಲಾರ ಪುಣ್ಯದಿಂದ ನನ್ನ ಮಗ ಬದುಕಿದ. ನಿಮ್ಮ ಹೊಟ್ಟಿ ತಣ್ಣಗಿರಲಿ; ನಿಮ್ಮ ಉಪಕಾರ ಭಾಳಾಯ್ತು.

**ಮ —** (ಕನಕರಾಯರಿಗೆ) ತಾವು ಇತ್ತ ದಯಮಾಡಿಸಬೇಕು. ಇಲ್ಲಿ ಕೂತುಕೊಳ್ಳಿರಿ.

ಕ — ಏನ್, ಏನಿಲ್ಲ. ಇರಲಿ, ಇರಲಿ. (ಕುರ್ಚಿಯ ಹತ್ತಿರ ಹೋಗಿ ಕುಳಿತುಕೊಳ್ಳದೆ ಹಾಗೇ ನಿಂತು) ಆ ಪಾದ್ರಿಸಾಹೇಬರನ್ನ ಮುಟ್ಟಿಕೊಂಡು ನಿಂತಾಳೋ ಏನು ಮತ್ತೆ ? (ಹೆಂಡತಿಗೆ) ಏಯ್, ಏ ಕತ್ತೆ ! ಎಷ್ಟ ಸಮೀಪ ಅದು ಹೋಗೋದು ? ದೂರಿಂದಽನ ಮಾತಾಡಲಿಕ್ಕೆ ಬರೂದಿಲ್ಲೇನು? ಒಂದು ಮಡಿ ಇಲ್ಲ, ಒಂದು ಮೈಲಿಗಿ ಇಲ್ಲ. (ಕೂಡುವನು)

ಮ — (ಡಾಕ್ಟರನ್ನು ತೋರಿಸಿ) ಇವರು ಏಬ್ರಾಂ ಡಾಕ್ಟರು. ಇವರು ಇದ್ದರಂತಽ ನಿಮ್ಮ ಮಗ ಬದುಕಿದ.

ಢ — (ಕನಕರಾಯರಿಗೆ) ನಿಮ್ಮದೂ ಒಂದು. ಮುಟ್ಟಲಿ ಬಿಡರಿ. ಮುಟ್ಟಿದರೇನಾಯಿತು ? ಸಾಯೋವಾಗೂ ಮುಟ್ಟಬಾರದೇನು ? ಸುಟ್ಟಿತು ನಿಮ್ಮ ಮಡಿ ! (ಡಾಕ್ಟರಿಗೆ) ಎನ್ರೆಪ್ಪಾ, ಅವರದೇನು, ಅವರು ಹಾಂಗಽ ಅಂತಿರತಾರ. ನೀವು ಮಾತ್ರ ಮನಸ್ಸಿಗೆ ಹಚ್ಚಿಗೋಬ್ಯಾಡ್ರಿ ಅಂ. ತಾವಽ ನೌಕರಿಯೊಳಗಿದ್ದಾಗ ಬೇಕಾದ್ದು ಮಾಡಿದರು; ಈಗ ಮನಿ ಸೇರಿದ ಮ್ಯಾಲ ಬಂದಽದ ಇವರ ಮಡಿ.

ಏ — ನಾನು ಹಾಗೆ ತಿಳಿಯುವದಿಲ್ಲ. ನಮ್ಮ ಕರ್ತನಾದ ಯೇಸುವು ಹೀಗೆ ಹೇಳಿದ್ದಾನೆ: ನನ್ನ ನಿಮಿತ್ತ ನಿಮ್ಮನ್ನು ನಿಂದಿಸಿ ಹಿಂಸಿಸಿ ಸುಳ್ಳಾಗಿ ನಿಮಗೆ ವಿರೋಧವಾಗಿ ಎಲ್ಲ ಕೆಟ್ಟ ಮಾತುಗಳನ್ನು ಹೇಳಿದರೆ ನೀವು ಭಾಗ್ಯ ವಂತರಾಗಿದ್ದೀರಿ. ಸಂತೋಷಿಸಿರಿ, ಯಾಕಂದರೆ ಪರಲೋಕದಲ್ಲಿ ನಿಮಗೆ ಪತ್ರಿಫಲ ಬಹಳ.

ಢ — ಅಯ್ಯ, ಇದೆಂಥಾ ಕನ್ನಡಽ ಸುದ್ದಿ, ತಿಳಿಯಽವಲ್ದು! ಆಗಲಿ, ಪುಣ್ಯವಂತರು ನೀವು. ನಿಮ್ಮ ಮನೀಗೆ ಬ್ಯಾಗ ತೋರಣ ಕಟ್ಟಲಿ.

ಏ — ಮಲ್ಲಿನಾಥರಾವ್, ಇವರು ಎರಡು ಮೂರು ದಿನ ಇಲ್ಲಿಯೇ ವಿಶ್ರಾಂತಿ ಪಡೆಯಲಿ. (ಸರ್ವೋತ್ತಮನಿಗೆ) ನೀವು ಆದಷ್ಟು ಮಾತನಾಡಿ ಶ್ರಮ ಮಾಡಿಕೊಳ್ಳಬಾರದು. (ಕನಕರಾಯರಿಗೆ) ನಿಮ್ಮ ಮಗನಿಗೆ ಗುಣವಾದ ಬಳಿಕ ನನ್ನ ಕಡೆಗೆ ಕಳಿಸಿಕೊಡರಿ. ಅವರಿಗೆ ದೊಡ್ಡದೊಂದು ನೌಕರಿ ಕೊಡಿ ಸುವ ಹಾಗೆ ಪ್ರಯತ್ನ ಮಾಡುತ್ತೇನೆ.

ಕ — ಅಂ ! ಏನು ? ನೌಕರಿ ? ಡಾಕ್ಟರಸಾಹೇಬ ನನ್ನ ಮಗನಿಗೆ

ನೌಕರಿ ಕೊಡಸತೀರಾ ? ನಿಮುಗ ಕೈಮುಗಿತೀನಿ, ಅಷ್ಟೊಂದು ಮಾಡಿ ಪುಣ್ಯ ಕಟ್ಟಿಕೊಳ್ರಿ.

**ಅಂ** — (ಧವಳಾಬಾಯಿಗೆ) ಈಗ ಅವರು ಇನ್ನೂ ಬಹಳ ಅಶಕ್ತ ಇದ್ದಾರೆ. ಡಾಕ್ಟರು ಹೇಳಿಧಾಂಗ ಎರಡು ಮೂರು ದಿನ ನಮ್ಮ ಮನೆಯಲ್ಲಿಯೆ ಇಟ್ಟಕೋತೀವಿ. ಗುಣವಾದ ಕೂಡ್ಲೆ ನೀವು ಕಳಕೊಂಡು ಹೋಗಬಹುದು. ಏನಂತೀರಿ ?

**ಮ** — ತಮುಗ ಒಪ್ಪಿಗೆ ಅದsಲ್ಲ ?

**ಧ** — ಹೂಂ, ಹಾಂಗs ಮಾಡ್ರಿ; ಅದರಾಗೇನದ.

**ಕ** — (ಹೆಂಡತಿಗೆ) ಏs, ಇಲ್ಲಿ ಬಾ ಇತ್ಲಾಗ.

**ಧ** — ಏನೋ ಎಂತೋ ಇವರ ಏಕಾಂತ ! (ಹತ್ತಿರ ಬರುವಳು)

**ಕ** — (ಮೆಲ್ಲಗೆ) ಏನ್ ಹಾಂಗ ಹೂಂ ಅಂದರ. ಇವರು ಯಾವ ಕುಲದವರೋ ಏನೋ ! ನಮ್ಮ ಹುಡಗನ್ನ ಇಲ್ಲಿ ಬಿಟ್ಟರ ಹ್ಯಾಂಗ ?

**ಧ** — ನನಗೇನ್ಮಣ್ಣು ತಿಳೀತದ ಇದೆಲ್ಲ.

**ಕ** — ಹಂಗಾರ ಸುಮ್ಮನಿರು. (ಮಲ್ಲಿನಾಥಗೆ) ತಾವು ಇಲ್ಲೀತನಕ ಶ್ರಮಪಟ್ಟು ಈತನ ಆರೈಕೆ ಮಾಡಿ ಜೀವ ಉಳಿಸಿದಿರಿ. ಅಷ್ಟೇ ಹೆಚ್ಚಾಯಿತು. ಮತ್ತ ಇನ್ನ ಮುಂದ ತಮುಗೆ ಶ್ರಮಾ ಕೊಡೋದು ಅಂದ್ರ, ನಮ್ಮ ಧರ್ಮ ಅಲ್ಲ. ಮನೆಗೆ ಕರಕೊಂಡು ಹೋಗಿ ನಾವs ಉಪಚಾರ ಮಾಡತೀವಿ.

**ಏ** — (ಕನಕರಾಯರಿಗೆ) ಇವರ ಹೆಸರೇನು ?

**ಕ** — ಸಂಪೂರ್ಣ ವಿಳಾಸನs ಬೇಕೇನು ?

**ಏ** — ಹೂಂ, ಹೇಳ್ರಿ. (ಡೈರಿ ತೆಗೆದು ಬರೆದುಕೊಳ್ಳಲು ಅಣಿಯಾಗುವನು)

**ಕ** — ಸರ್ವೋತ್ತಮರಾವ್ ಕನಕರಾವ್ ದೇಶಪಾಂಡೆ. ಬಿ. ಎ. ಕೇರ್ ಆಫ್ ಕನಕರಾವ್ ಭುಜಂಗರಾವ್ ದೇಶಪಾಂಡೆ, ರಿಟೈರ್ಡ ಪಬ್ಲಿಕ್ ಪ್ರೊಸಿಕ್ಯೂಟರ್, ಬಿದ್ದೂರು.

**ಏ** — (ಬರೆದುಕೊಳ್ಳುತ್ತ) ಇವರ ಮದಿವೆ ಆಗಿದೆಯೋ ?

**ಕ** — ಇಲ್ಲ. ನೌಕರಿ ಸಿಕ್ಕಕೂಡಲೆ ಮಾಡುವ ವಿಚಾರ ಅದ.

ಏ — (ತನ್ನ ಸಾಮಾನು ತೆಗೆದುಕೊಂಡು) ಒಳ್ಳೇದು, ಇನ್ನು ನಾನು ಹೊರಡುತ್ತೇನೆ. ಯಾವಾಗಲೂ ಮಹಿಮೆಯುಳ್ಳ ಯೇಸುವನ್ನು ಸ್ಮರಿಸುತ್ತ ಇರಿ. Good-Bye ! Good-Bye !

[ಹೋಗುವನು]

ಕ — (ಹೆಂಡತಿಗೆ) ಏ, ನಾವೂ ಹೊರಡೋಣು ಇನ್ನ. ನಡಿರಿ. (ಮಲ್ಲಿನಾಥರಾಯರಿಗೆ) ರಾಯರ, ನಾವು ಬರತೀವಿನ್ನ.

ಮ — ಸ್ವಲ್ಪ ತಡೀರಿ. ಅವರ ಅರಿವೆ ಒಳಗಿವೆ. ಹೋಗಿ ಬದ್ಲಾಯಿಸಿಕೊಂಡು ಬರಲಿ. ಅಂಜನಾ, ಅವರಿಗೆ ಅರಿವೆ ತೆಗೆದುಕೊಡು.

[ಅಂಜನಾ, ಸರ್ವೋತ್ತಮ ಒಳಗೆ ಹೋಗುವರು]

ಢ — (ಹೋಗುತ್ತಿರುವ ಅಂಜನೆಯನ್ನು ನೋಡಿ) ಎಂಥಾ ಬಂಗಾರದಂಥಾ ಹುಡಿಗಿ ! ನೋಡಿದರ ಮುದ್ದು ಬರತದ (ಮಲ್ಲಿನಾಥರಾಯರಿಗೆ) ಈಕಿನ್ನ ಯಾವ ಊರಿಗೆ ಕೊಟ್ಟಿದ ?

ಕ — ತಗದ್ಲು ತನ್ನ ಪಂಚಾಂಗ. ಯಾತಕ್ಕ ಬೇಕಾಗಿದ್ದೀತು ಇದೆಲ್ಲ ?

ಮ — ಈಕಿ ಮದಿವೀನs ಆಗಿಲ್ಲ ಇನ್ನೂ.

ಢ — ಇನ್ನೂ ಆಗಿಲ್ಲs ! ಅದ್ಯಾಕರೆಪ್ಪಾ, ಇಂಥಾ ಮುತ್ತಿನಂಥ ಹುಡಿಗೀ ಮದವಿ ಯಾಕ ಮಾಡಿಲ್ಲ ಇನ್ನೂ ?

ಮ — ವರಾ ಸಿಕ್ಕಿಲ್ಲ.

ಢ — ಹೂಂ, ಪಾಪ ! ಬ್ಯಾಗನ ಮದಿವಿ ಮಾಡಿಬಿಡ್ರಿ.

ಮ— ನಾನೂ ಅದs ವಿಚಾರದಾಗಿದ್ದೇನಿ. ಆದರ....

ಢ — ಯಾಕ, ಕೂಡಿಬರವಲ್ಲವೇನು ಮತ್ತ ?

ಮ — ಅದೇನಿಲ್ಲ.

ಕ — ಈ ಹೆಣ್ಣಮಕ್ಕಳಿಗೆ ಇಲ್ಲದ ಕಿತಾಪತಿ ಬಹಾಳ ಬೇಕು, ನೋಡ್ರಿ. ನೀ ಅದನ್ನೆಲ್ಲ ತಗೊಂಡು ಏನು ಮಾಡತೀದಿ ? ಏನು ಬೀಗತನ ಮಾಡೋವಾಕಿದ್ದೀದೇನು ?

ಢ — ಹಾಂಗಿದ್ದರs ಕೇಳಬೇಕು, ಇಲ್ಲಿದ್ರ ಕೇಳುಬಾರದೇನು ?

ನಿಮ್ಮದೂ ಒಂದು. ಆದೀತು, ದೈವದಾಗಿದ್ದರ ಬೀಗತನಾನs ಆದೀತು.

**ಕ** —ಥತ್, ಏನಾರ ಒಂದು ಬೊಗಳಬ್ಯಾಡ.

[ಸರ್ವೋತ್ತಮ ವೇಷ ಬದಲಿಸಿಕೊಂಡು ಬರುವನು]

ಸರ್ವೋತ್ತಮ ಬಂದ. ಹೋಗೋಣಿನ್ನ.

**ಸ** — (ಮಲ್ಲಿನಾಥರ ಕಡೆಗೆ ಹೋಗಿ) ಬರತೇನಿ ನಾ ಇನ್ನ. ನೀವು ನನಗೆ ಜೀವದಾತರು. ನೀವು ಮಾಡಿದ ಉಪಕಾರ ಅಷ್ಟಿಷ್ಟಲ್ಲ. ಬ--ರ-ತೇನಿ....ನಮಸ್ಕಾರ.... (ಬಗ್ಗಿ ನಮಸ್ಕರಿಸುವನು)

[ ಅಂಜನಾ ಬಂದು ಧವಳಾಬಾಯಿಗೆ ನಮಸ್ಕರಿಸುವಳು ]

**ಧ** — (ತಲೆಮುಟ್ಟಿ) ಅಖಂಡಮುತ್ತೈದಿ ಆಗು, ಸಾವಿತ್ರಿ ಆಗು. ಬ್ಯಾಗನ ಮದಿವಿ ಆಗಿ ಎಂಟು ಮಕ್ಕಳ ತಾಯಿ ಆಗು !

[ ಕನಕರಾಯರಿಗೆ ಬಂದು ನಮಸ್ಕರಿಸುವಳು ]

**ಕ** — ಇರ್ಲಿ, ಇರ್ಲಿ. ಅಷ್ಟಪುತ್ರಸೌಭಾಗ್ಯವತೀ ಭವ.

**ಮ** — (ಸರ್ವೋತ್ತಮನನ್ನು ತೋರಿಸಿ) ಅವರಿಗೂ ಮಾಡು ಅಂಜನಾ.

[ ಸರ್ವೋತ್ತಮನಿಗೆ ನಮಸ್ಕರಿಸುವಳು ]

[ ಸರ್ವೋತ್ತಮ, ಕನಕರಾಯ, ಧವಳಾಬಾಯಿ ಹೊರಡುವರು. ಹೋಗುವಾಗ ಕೊನೆಯಲ್ಲಿರುವ ಧವಳಾಬಾಯಿಗೆ ಅಂಜನಾ ಕುಂಕುಮ ಹಚ್ಚುವಳು. ಧವಳಾಬಾಯಿ ತಿರುಗಿ ಅಂಜನೆಯ ಕೈಯೊಳಗಿನ ಕುಂಕುಮಕರಡಿಯೊಳಗಿಂದ ಕುಂಕಮ ತೆಗೆದುಕೊಂಡು ಅಂಜನೆಗೆ ಹಚ್ಚುವಳು.

— ತೆರೆ —

———

## ಅಂಕ ~ ~ ~ ೨.

### ದೃಶ್ಯ ೧.

[ ಕನಕರಾಯರ ಮನೆಯ ಪಡಸಾಲೆ ]

**ಕ** — (ಮುಖ, ಕಾಲು ಪಂಜೆಯಿಂದ ಒರಸಿಕೊಳ್ಳುತ್ತ) ' ಹರೇ ಕೃಷ್ಣ ಹರೇ ಕೃಷ್ಣ, ಕೃಷ್ಣಕೃಷ್ಣಾ ಹರೇಹರೇ ! (ಕಿವಿಯ ಜನಿವಾರ ತೆಗೆದು) ಸರ್ವೋತ್ತಮರಾಯಾ....ಹರೇಕೃಷ್ಣ ಹರೇಕೃಷ್ಣ.....ಸರ್ವೋತ್ತಮಾ....ಕೃಷ್ಣ ಕೃಷ್ಣಾ ಹರೇ ಹರೇ....ಏs ಸರ್ವೋತ್ತಮಾ!....ಪ್ರಾತಃಕಾಲೆ ಸ್ಮರೇನ್ನಿತ್ಯಂ.... ಏs ಕತ್ತೆ ಸವ್ವ್ಯಾ ! ಇನ್ನೂ ಎದ್ದಿಲ್ಲೇನೋ ಹಾಸಿಗಿಯಿಂದ ? ಥತ್ ! ಆಲಸ್ಯಮುಟ್ಟಿ, ಈಗಿನ ಹುಡುಗರು ! ಏ ಸರ್ವೋತ್ತಮಾ !....

**[ ತೇರೆಯಲ್ಲಿ ]**

**ಢ** — ಯಾಕ ಸುಮ್ಮನ ಒದರಿಕೋತೀರಿ ? ಅಂವಾ ಆಗಳೇನs ಎದ್ದು ಆ ಡಾಕ್ಟರ ಕಡಿಗೆ ಔಷಧ ತರಲಿಕ್ಕೆ ಹೋಗ್ಯಾನ.

**ಕ** — ಆಗಳೆ ಬಂದ್ಲು ನಡುವ ಕಾರಭಾರಾ ಮಾಡ್ಲಿಕ್ಕೆ. ನಾನು ನಿನ್ನ ಒದರಿದ್ನೇನು ?

**ಢ** — (ಹೊರಗೆ ಬಂದು) ಯಾಕ, ಒದರದ ಬರsಬಾರದೇನೂ ?

**ಕ** — ನೀ ಯಾಕ ಬಂದಿ ಇಲ್ಲೆ ? ಸುಮ್ಮನ ಹೋಗು ಒಳಗ.

**ಕ** — ಧನಿ ಕೇಳಿಸಿತೂ ಅಂತ ಬಂದೆ. ನಿಮಗs ಏನಾರs ಬೇಕಾಗಿದ್ದೀತು, ಕೇಳೋಣ ಅಂತ ಬಂದೆ. ಬಿಡ್ರಿ ಹಂಗಾರ, ಇಷ್ಟ ಅಸಹ್ಯ ಪಟ್ಟುಕೋತಿದ್ದರ ನಂದಾರೆ ಏನ್ ಆದ. (ಹೊರಟು ನಿಲ್ಲುವಳು)

**ಕ** — ಏಯ್ ಬಾ ಇಲ್ಲೆ ಇರಲಿ. ಸರ್ವೋತ್ತಮ ಎಲ್ಲಿಗೆ ಹೊಗ್ಯಾನ ಅಂದಿ ?

**ಢ** — ಡಾಕ್ಟರ ಮನೀಗೆ.

**ಕ** — ಇಷ್ಟು ಲಗೂ ಹೋಗಿಬಿಟ್ಟನs. ಶ್ಚಶ್ಚಶ್ಚ !

**ಢ** — ಮತ್ತೇನಾದರೂ ಹೇಳೋದಿತ್ತೇನವಗ ?

ಕ — ಹೌದು, ಇತ್ತು.

ಢ ಏನೂ ?

ಕ — ಮತ್....ಹೌದs. ಹೆಣ್ಮಕ್ಕಳಿಗೆ ಏನ್ ತಿಳೀತದ ಇದರಾಗೆಲ್ಲ? ಎಲ್ಲಾದರಾಗೂ ಬಾಯಿ ಹಾಕಿದ್ಲs ಬಂದು.

ಢ — ಬಿಡ್ರಿನ್ನ ಹಂಗಾರ; ಬಾಯಿ ಹೊಲಕೊಂಡು ಕೂಡತೇನಿ.

ಕ — ಹೌದs. ಮತ್ತೇನಿಲ್ಲ. ಹದಿನೈದು ದಿವಸದ ವ್ಯಾಲ ಆಗಿ ಹೋತ್ಯ, ಸರ್ವೋತ್ತಮನ ನೌಕರಿ ಬಗ್ಗೆ ಏನಾದರೂ ಸುದ್ದಿ ಬಂದದೋ ಏನೋ ಮುಂಬೈಯಿಂದ; ಕೇಳಿಕೊಂಡು ಬಾ ಅಂತ ಹೇಳೋದಿತ್ತು. ಎಲ್ಲಾ ದಕ್ಕೂ ನಾವs ಬಡಕೋಬೇಕು. ಏನು ಈಗಿನ ಹುಡುಗರೋ ಏನೋ, ತಿಳೀದ್ಹಾಂಗs ಆಗೇದ !

ಢ — ಪಿಸ್ಸ್! ಇದs ಹೊದಲ್ಲೊ ? ಮತ್ತ ಸುರುವು ಆಕ್ಯs ನಿಮ್ಮ ನೌಕರೀ ಕಿಟಿಕಿಟಿ ? ಸ್ವಲ್ಪ ದಿವಸ ಹೋಗಲಿ. ಈಗಳಿಂದsನs ಒಂದs ಷವನ ನೌಕರೀ ಅಂತ ಬೆನ್ನು ಹತ್ತಬ್ಯಾಡ್ರಿ.

ಕ — ಹಃ ಹಃ ಹಃ ಎಂಥಾ ಹುಚ್ಚೀ ನೀನು ! ಹೇಳಿ ಮಾಡಿಸಿದ ಹುಚ್ಚಿ ನೋಡು ! ಈಗ ಮೊದಲs ಬ್ರಾಹ್ಮಣರಿಗೆ ನೌಕರಿ ಕಿಬಿಕಿಬಿ ಅಂದರೂ ಸಿಗೂದಿಲ್ಲ. ಏನೋ ಪುಣ್ಯಾತ್ಮಾ, ಆ ಡಾಕ್ಟರ, ಮನಸ್ಸಿಗೆ ಹಚಿಗೊಂಡು ನೌಕರೀ ಕೊಡಸತೇನಿ ಅಂತಾನ. ಇಂಥಾ ಸಂಧಿ ಮತ್ತ ಸಿಗತದ ? ಸ್ವಲ್ಪ ಫೀ ಹೋದರೂ ಚಿಂತಿಲ್ಲ, ಮುಟ್ಟ್ಯೋವಷ್ಟ ಅವರಿಗೇ ಮುಟ್ಟಲಿ ಅಂತ ಆ ಡಾಕ್ಟರ ಕಡಿಂದ ಔಷಧ ಕೊಡಸೋವು, ತಿಳೀತs ?

ಢ — ಆದರ ಒಂದsಸವನ ಹೀಂಗ ಮತ್ತ ಬೆನ್ನುಹತ್ತಿದರ, ಜೀವಕ್ಕ ಮತ್ತೆಲ್ಲಿ ಅಪಾಯ ಮಾಡಿಕೋತಾನೋ ಏನೋ ಅಂತ ನನಗ ಹೆದರಿಕೆ.

ಕ — ಹೀಂಗ ಅಚ್ಛಭಾ ಮಾಡಿಯೇ ಈ ಗತಿಗೆ ತಂದಿಟ್ಟಿ.

ಢ — ಅದೇನಾರ ಇರಲಿ, ಈಗಂತೂ ನೀವು ಹುಡುಗನ್ನ ಕಾಡ ಬ್ಯಾಡ್ರಿ ಅತು.

ಕ — ದೊಡ್ಡ ಶಾಣ್ಯಾಕಿ ಕಾಣಸ್ತೀಯಲ್ಲ ! ಎಷ್ಟಂದರೂ ನಿಮಗ

ಅಡಿಗೀಮನೀನ ಯೋಗ್ಯ. ಅಲ್ಲಕ, ಇಂಥಾ ಪ್ರಸಂಗ ಏನ್ಮಾಡಿದರ ಸಿಕ್ಕೀತು ಹೇಳು ?

**ಢ** — ಇವತ್ತಿಲ್ಲ ನಾಳೆ, ನಾಳಿಲ್ಲ ನಾಡದು; ಎಲ್ಲಿ ಹೋಗತದ ಆ ಪ್ರಸಂಗ ಸುಟ್ಟಬರ್ಲಿ.

**ಕ** — ಆದೇನು ಬಾಳೀಹಣ್ಣಾ ಅಂತ ತಿಳಕೊಂಡೀಯೇನು, ಬೇಕಾದಾಗ ಸಿಗತದ ಅನ್ನಲಿಕ್ಕೆ. ಒಂದು ನೌಕರಿ ದೊರಕಿಸಬೇಕಾದರ ಪೂರ್ವಜರ ಪುಣ್ಯಾ ಎಲ್ಲಾ ಖರ್ಚಾಗಿ ಹೋಗತದ. ನಂದಕ ನೋಡಿದ್ಯೋ ಇಲ್ಲೋ ?

**ಢ** — ಎಲ್ಲಾ ಗೊತ್ತದ.

**ಕ** —ನಮ್ಮ ಮನೆತನಾನಕ ನೌಕರೀದು. ನಮ್ಮ ಅಜ್ಜ ನೌಕರಿ, ನಮ್ಮ ತಂದಿ ನೌಕರಿ, ನಾನೂ ನೌಕರಿ........

**ಢ** — ಅಂತಕ ನೌಕರೀ ಹುಚ್ಚು ಇಷ್ಟು ವ್ಯೆಯಾಗ ಭೇದಿಸೇದ.

**ಕ** — ಆ ನೌಕರಿ ಮಾಡಿ ನಾನು ತಂದು ಹಾಕದಿದ್ದರ ತಿಳೀತಿತ್ತು ನಿನ್ನ ಬಣ್ಣಾ. ಈ ಸೀರಿ, ಈ ವಸ್ತ್ರ, ಈ ಡೌಲು ಎಲ್ಲಿಂದ ಬರತಿದ್ದವು ?

**ಢ** — ನಿಮ್ಮ ತಲೀಗೆ ಮುಗದಕದ, ಮುಗುದು ಹೋಗಲಿ. ಅಂಥಾ ನೌಕರಿ ಮಾಡೋದೇನು ಬ್ಯಾಡ ನನ್ನ ಮಗ. ಏನಾರ ಉದ್ಯೋಗಮಾಡಿ ಹೊಟ್ಟೆ ತುಂಬಿಕೊಂಡಾನು.

**ಕ** — ಅಬಾಬಬಬ ! ನೆಟ್ಟಗದ ಹಂಗಾರ. ಉದ್ಯೋಗ ! ಏನು ನಿಮ್ಮ ತಲಿ ಉದ್ಯೋಗ ಮಾಡತೀರಿ ? ಉದ್ಯೋಗ ಬ್ರಾಹ್ಮಣರಿಗೆ ಒಗ್ಗಾದಿಲ್ಲ. ಅವರಿಗೆ ನೌಕರೀನೆ ಗತಿ. ಆದೇ ಅವರಿಗೆ ಮುಯ್ರ್ಯಾದಿ. ನೌಕರಿ ಇಲ್ದಿದ್ರ ಯಾರು ಕೇಳತಾರ ? ಕತ್ತಿ ಮಾತಾಡಸೂದಿಲ್ಲ ಕತ್ತಿ !

**ಢ** — ಸಾಕು ಸಾಕು ನಿಮ್ಮ ರಗಳೀ ಪುರಾಣ. ಮಗಾ ನೌಕರೀನಕ ಮಾಡಬೇಕೂ ಅಂತ ನಿಮ್ಮ ಮನಸ್ಸಿನಾಗ ಆದ ಹೌದಲ್ಲೋ ? ಹಾಂಗಿದ್ದರ ಬೈದು, ಅಂದು, ಯಾಕ ಹೇಳತೀರಿ ? ಆತ ಏನು ಸಣ್ಣಾತನಕ ? ಒಂದಕ ಸವನ ಕಿಟಿಕಿಟಿ ಹತ್ತಿದರ ಅಂವಾದರೂ ಹ್ಯಾಂಗ ತಡಕೊಂಡಾನು ?

**ಕ** — ನಾನೆಷ್ಟು ಕಿಟಕಿಟಿ ಹತ್ತಿದರೂ ನೀ ನಿನ್ನ ಹಿರೇ ಸೊಸಿಗೆ ಹತ್ತಿದಷ್ಟು ಬ್ಯಾರೆ ಹತ್ತಿಲ್ಲಕ ? ಇಬ್ಬರೂ ಕಣ್ಣಾ ಮುಚ್ಚಿಗೊಂಡು ಹೋಗ್ಯಾರ ಅಂತ ಪಾರಾದರು.

ಢ — ನೀವೇನು ಕಡಿಮಿ ಮಾಡಿದಿರಿ. ಹಡದ ಮಗಳಕಿಂತ ನಿಮ್ಮ ನೌಕರಿ ನಿಮಗ ಹೆಚ್ಚಾತು. ಮಗಳನ್ನ ನುಂಗಿ ನಿರುಹಿಡಿದ್ರಿ. ಇವೊತ್ತಿಗೂ ಎಲ್ಲಿದ್ದಾಳ ಪತ್ತೇ ಇಲ್ಲ. ನಿ ...ರ್ಮ....ಲಾ,....ನಿರ್ಮಲಾ (ಬಿಕ್ಕುವಳು)

ಕ — ಎತ್ತಲಾಗಿಂದರೆ ಮಾತು ಅಲ್ಲಿಗೇ ತರೋದು, ಅತಗೋತ ಕೂಡೋದು.

ಢ — ಮತ್ತೇನು ಮಾಡ್ಲಿ ಹಂಗಾರ ? ಹೊಟ್ಟೆಯೊಳಗಿನ ಬೆಂಕೀ ಹ್ಯಾಂಗ ತಡಕೊಳ್ಳಲಿ ? ಕಿಟಿಕಿಟಿ ಮಾಡಿ ಮಾಡಿ ಮನೀ ಮಗಳನ್ನ ಸುಡ ಗಾಡಕ್ಕಿಟ್ಟರಿ. ಈಗ ಈ ಹುಡುಗನ ಸುತ್ತ ಹತ್ತಿಬಿದ್ದೀರಿ.... (ಬಿಕ್ಕುವಳು)

ಕ — ಅಬ್ಬಾ ! ಸರಕಾರದವರು ನಿನ್ನ ಬಾಯಿಗೂ "ಆರ್ಮ್ಸ್ ಆ್ಯಕ್ಟ" ಯಾಕ ಲಾಗೂಮಾಡಿರಲಿಕ್ಕಿಲ್ಲಾ ಅಂತೀನಿ. ಈ ಬಾಯ್ಗುಂಡಿಗೆ ಜರ್ಮನೀ ತೋಫಿನ ಗುಂಡೂ ಝುಕ್ಕಿಸಿದವು.

ಢ — ಹುಂ ಹೂಂ ! ಗಂಡಸರ ಬಾಯೇನು, ಎಂಥಾ ಗುಂಡು ಬಂದರೂ ನುಂಗತಾವ ಖೋಡಿ. ಅದೇನs ಇರ್ಲಿ, ನೀವಿನ್ನ ಮ್ಯಾಲ ಸರೂನ ಸುತ್ತ ಹತ್ತಬ್ಯಾಡ್ರಿ ನೋಡ್ರಿ.

ಕ — ಹೀಂಗs ? ಆಗಲಿ, ಮಹಾರಾಣಿಯವರ ಆಜ್ಞಾ. (ಒಮ್ಮೆಲೆ ಒಳಗೆ ಹೋಗುವನು)

ಢ — ಅಯ್ಯs, ನಮ್ಮವ್ವ ! ಹೋಗೇಬಿಟ್ಟರಲ್ಲ ! ಇನ್ನೇನು ಗತಿ ಮಾಡ್ಲಿ ? (ರಾಯರಿಗೆ) ಅಲ್ಲ್ರಿ, ಇಲ್ಲಿ ಬರ್ರೀ ಅಂದೆ. ಬಂದಾವರೂ ಬರ್ರೀ ಇಲ್ಲೆ.........

ಕನಕರಾಯರು ಬರುವರು ]

ಅಲ್ಲ್ರಿ, ಬ್ಯಾನೀ ಹುಡುಗ, ಅದಕ್ಕ ಹೇಳಿದೆ. ಮತ್ತೇನಿಲ್ಲ.

ಕ — ಹುಂ, ಹೊಲೇರ ಮೈಲಿಗಿ ತಂದು ಮನಿಯೊಳಗೆಲ್ಲ ಕಲಸಿ ದರೂ ಸುಮ್ಮನ ಕೂಡು ಅಂದರ ಹ್ಯಾಂಗ ?

ಢ — ಹಾಂಗ ಮಾಡಬಾರದಪ್ಪಾ ಅಂತ ತಿಳಿಸಿ ಹೇಳಬೇಕು. ನಾನೂ ಹೇಳತೇನಿ.

ಕ — ಅದಕ್ಕs ನೌಕರಿ ಹಿಡಿ ಅಂತ ಅಂಬೋದು.

ಢ ಅದಕ್ಕ ಇದಕ್ಕ ಏನು ಸಂಬಂಧ? ಹ್ಯಾಂಗೂ ನಿಮ್ಮ ಪೆನ್ಶನ್ ಬರ್‍ತದ. ಹೊಲ ಅವ, ಮನಿ ಆದ........

ಕ — ಅಂದರ ಕೂತು ತಿನ್ನಲಿ ಮಗಾ ಅಂತೀಯೇನು? ಹಾಂಗಾದರ ಸ್ವಲ್ಪs ದಿನದಾಗs ಬಿಕ್ಕೀ ಬೇಡಬೇಕಾದೀತು ಬಿಕ್ಕಿ!

[ ಸರ್ವೋತ್ತಮ ಔಷಧದ ಬಾಟ್ಲಿ ಹಿಡಕೊಂಡು ಬರುತ್ತಾನೆ ]

ಢ — (ಗಂಡನಿಗೆ) ಇನ್ನ ಸುಮ್ಮನಿರ್ರಿ ಸಾಕು. ಸರೂ ಬಂದ.

ಸ — (ಧವಳಾಬಾಯಿಗೆ) ಬಿಕ್ಕಿ ಯಾಕ ಬೇಡಬೇಕಾಗತದ ಅವ್ವಾ?

ಕ — ನೌಕರಿ ಮಾಡದಿದ್ರ ಬ್ರಾಹ್ಮಣರಿಗೆ ಗತಿ ಏನದ ಮತ್ತ?

ಸ — ಬ್ರಾಹ್ಮಣರಿಗೆ ನೌಕರಿ ಒಂದs ಗತಿ ಏನು ಬದುಕಲಿಕ್ಕೆ?

ಕ — ಮತ್ತ ಬ್ಯಾರೆ ಏನದ?

ಸ — ಮಾಡಿದರ ನೌಕರೀನs ಮಾಡಬೇಕು; ಇಲ್ಲಿದ್ರ ಬಿಕ್ಕೀನs ಬೇಡಬೇಕೇನು?

ಕ — ಮತ್ತ ಬ್ಯಾರೆ ಏನು ಮಾಡವರು?

ಸ — ಯಾವದಾದರೂ ಉದ್ಯೋಗ.

ಕ — ಉದ್ಯೋಗ! ಕಳವಿನ ಉದ್ಯೋಗಾ ಒಂದು ಮಾಡಿದರ ಮಾಡಬೇಕು ಇನ್ನ.

ಸ — ಅದ್ಯಾಕ, ಸಂಸ್ಕೃತ ಅಭ್ಯಾಸ ಮಾಡಿ ಹುಡುಗರಿಗೆ ಪಾಠ ಹೇಳಿದರ........

ಕ — ಓಹೋ! ಮಂತ್ರಾ ಕಲ್ತು ಮಂದೀ ಮನಿ ಘಂಟೆ ಹೊಡಿದು ಹೊಟ್ಟೀ ಹೊರಕೋಬೇಕಂತೀರೇನು ತಾವು? ಗಂಟಲ ಹರಿಯೋ ಸುದ್ದಿಲ್ಲದೆ ಮೂರು ಮೂರು ತಾಸು ಒದರಿಕೊಂಡರೂ ಒಂದು ಮುಷ್ಟಿ ಅಕ್ಕಿ ಸಿಗೂದಿಲ್ಲ, ಗೊತ್ತಿದೆಯೇನು ಇದು ರಾಯರಿಗೆ? ಮಂತ್ರ ಹೇಳುತ್ತ ಕೂತರ ಒಂದು ಕವಡೀ ತುಣುಕು ಸಹಿತ ಕೈಯಾಗ ಹಾಕೂವಿಲ್ಲ ಯಾರೂ. ರಾಯರು ಮುಚಿಮುಚಿಗೊಂಡು ಮಂತ್ರದ ಪುಸ್ತಕ ಓತ್ತಿರೋದು ಇದಕ್ಕs ಏನು? ಓಹೋ! ಈಗ ಹೊರಬಿತ್ತು ಗುಟ್ಟು!

ಸ — ಅದರಾಗ ಗುಟ್ಟೇನದ. ಸಂಸ್ಕೃತ ಓದೋದು ಮಂದೀ ಮನಿ ಘಂಟೆ ಬಡಿಯೋದಕ್ಕಲ್ಲ. ಧರ್ಮದ ಮೂಲತತ್ವ ತಿಳಕೊಳ್ಳಲಿಕ್ಕೆ.

**ಕ** — ಆಹಾ ! ದೊಡ್ಡ ಮಧ್ವಾಚಾರ ಅವತಾರ ನೀನು ! ಧರ್ಮದ ಮೂಲತತ್ವಾ ತಿಳಕೋತಾನಂತ ! ಮೊದಲ ಹೊಟ್ಟೀ ತತ್ವಾ ತಿಳಕೋ. ಆವ್ಯಾಲ ಧರ್ಮದ ತತ್ವ ತಿಳಕೊಂಬೀಯಂತ ! ಜಗತ್ತು ನಿಮ್ಮಂಥವರನ್ನ ಕಂಡು ನಗತೈತಿ ಅಂದೆ ! ಅದಕ್ಕೇನು ನಿಮ್ಮ ಈ ಆದರ್ಶ ಬ್ಯಾಡ, ನಿಮ್ಮ ಈ ನೀತಿ ಬ್ಯಾಡ. ಅದಕ್ಕ ಬೇಕು ಒಂದು ವ್ಯವಹಾರ, ವ್ಯವಹಾರಬುದ್ಧಿ. ಈ ಜಗತ್ತಿನಾಗ ಈಸಿ ಮುಪ್ಪಾದವರ ಮಾತು ಒಂದಿಷ್ಟು ಕೇಳು.

**ಸ** — ಮಾತಿಗೆ ಮಾತು ಬೆಳಿಸುವ ಮನಸ್ಸಿಲ್ಲ ನನಗ ಇನ್ನ. ಸಾಕು.

**ಕ** — ಹ್ಯಾಂಗ ಇದ್ದೀತಪಾ ! ಮನಿಯೊಳಗ........ (ಸನ್ನೆ ಮಾಡಿ) ಸಿಗತದ ಸಮೀಚೀನ !

**ಢ** — ಅಲ್ಲಾ, ಮತ್ತ ಸುರುವುಮಾಡಿದಿರಾ ?

**ಕ** — ಇಲ್ಲೆ. ಸುಮ್ಮನೆ ಮಾತು........

**ಢ** — ಅದು ಹೋಗಲಿ ಸರೂ, ಡಾಕ್ಟರದು ಏನಾತು ?

**ಸ** — ಅವರಿಗೆ ಮುಂಬೈಯಿಂದ ಪತ್ರ ನಿನ್ನೆ ಬಂದದಂತ.

**ಕ** — ಆಂ, ಆಂ ! ಏನು ? ಪತ್ರ ಬಂದೈದಂತೆ ! ಏನಂತ ಪತ್ರ ಬಂದೈದಂತ ?

**ಸ** — ಡಾಕ್ಟರೆ ಬಂದು ನಿಮಗ ಭೆಟ್ಟಿಯಾಗತಾರಂತ.

**ಕ** — ತಾವೆ ಬಂದು ಭೆಟ್ಟಿ ಆಗತಾರಂತೆ ? (ಅನುಮಾನದಿಂದ ತಲೆ ತುರಿಸುತ್ತ) ಹಂಗಾದರ ನಡುವ ಏನಾದರೂ ಗೋಪಾಳ ಬೇಡತಾರೋ ಏನು? ಸರಿ, ಬೇಡಿದರ ಕೊಟ್ಟರಾಯಿತು. ಈಗಿನ ದಿನದಾಗ ಯಾವ ಕೆಲಸ ಹಾಂಗೆ ಆಗ್ತಾವ ?

**ಸ** — ಅದು ಏನೋ ಎಂತೋ ನಿಮಗೆ ತಿಳೀಬೇಕು. ನಿಮಗ ಈ ಮಾತು ತಿಳಿಸು ಅಂದರು; ತಿಳಿಸಿದೆ. (ಒಳಗೆ ಹೋಗಲುದ್ಯುಕ್ತನಾಗುವನು)

**ಕ** — ಸರ್ವೋತ್ತಮಾ, ಇಲ್ಲಿ ಸ್ವಲ್ಪ ನಿಂದ್ರು. ಯಾವಾಗ ಬಂದು ಭೆಟ್ಟಿ ಆಗತಾರಂತ ?

**ಸ** — ನಾಲ್ಕೈದು ದಿವಸದೊಳಗ.

[ ಸರ್ವೋತ್ತಮ ಒಳಗೆ ಹೋಗುವನು ]

**ಢ** — ಹೀಂಗ ಮಾಡಬೇಕು. ನೀವೆ ಹೋಗಿ ಇವತ್ತೇ ಅವರ್ನ

ಭೆಟ್ಟಿಯಾಗಿ ಬರಬೇಕು ?

**ಕ** — ಛೇ, ಅಷ್ಟು ಅಗ್ಗ ಆಗಬಾರದು. ಹೀಂಗ ಮಾಡೋಣು ನಿಂದ್ರು. ಅವರನ್ನs ನಮ್ಮ ಮನೀಗ'ಟೀಪಾರ್ಟಿ'ಗೆ ಕರೆದುಬಿಡೋಣ. ಅಂದ್ರ ಎಲ್ಲಾ ತಿಳಕೋಳ್ಳಿಕ್ಕೆ ಅನುಕೂಲ ಆಗತದ.

**ಢ** — ಹೂಂ. ಹಾಂಗs ಮಾಡ್ರಿ. ಆದರ ಖೋಡಿ, ಅವರನ್ನ ಮುಟ್ಟಿ ಚಹಾ ಹ್ಯಾಂಗ ಕುಡಿಯೋದು ಅಂತ ?

**ಕ** — ಅದಕ ಏನಾದರೂ ಮಾಡಿದರಾಯ್ತು, ಆಪದ್ಧರ್ಮ ಅಂತ. ಕೆಲಸ ಯಾರ ಮನಿದು.

**ಢ** — ಎಷ್ಟೊತ್ತಿಗೆ ಬರಲಿಕ್ಕೆ ಹೇಳೋವರು ?

**ಕ** — ಎಷ್ಟೊತ್ತಿಗೆ ಹೇಳಲಿ ?

**ಢ** — ನನ್ನs ತಿರಿಗಿ ಕೇಳಿದರ ನಾಯೇನ್ ಹೇಳ್ಲಿ ಮಣ್ಣು. ಸರೂನ್ನ ಕರದು ಕೇಳ್ರಿ, ಅಂದ್ರ ಗೊತ್ತಾಗತದ.

**ಕ** — ಹೌದು ನಿಂದ್ರು. ಸರ್ವೋತ್ತಮಾ, ಬಾ ಇಲ್ಲೆ.

[ ಸರ್ವೋತ್ತಮ ಬರುವನು ]

ಇಲ್ಲಿ ನೋಡು, ಹೀಂಗ ಮಾಡಬೇಕೂ ಅಂತ ಮಾಡೇವಿ. ಡಾಕ್ಟರನ್ನs ಇವತ್ತ 'ಟೀಪಾರ್ಟಿಗೆ' ಇಲ್ಲಿಗೆ ಕರೆದುಬಿಡಬೇಕು ಅದಕ್ಕ ಎಷ್ಟೊತ್ತಿಗೆ ಬರಲಿಕ್ಕೆ ಹೇಳಿದರ ಅನುಕೂಲ ಆದೀತು ?

**ಸ** — ಅವರನ್ನ ಕರದರ ಹ್ಯಾಂಗ....ನಿಮ್ಮ ಮಡೀ ಮ್ಯಾಲಿಗೆ....

**ಕ** — ಅದನ್ನೆಲ್ಲಾ ನಾವು ನೋಡಿಕೋತೀವಿ. ನೀ ಹೊತ್ತಷ್ಟs ಹೇಳು.

**ಸ** — ನಾಲ್ಕು ಘಂಟೆಗೆ ಅನುಕೂಲ ಅಂತ ಕಾಣಸತದ.

**ಕ** — (ಹೆಂಡತಿಗೆ) ಏನು ಇರಲಿ ಹೌದಲ್ಲೊ ?

**ಢ** — (ತಲೆಯಲ್ಲಾಡಿಸುವಳು)

**ಕ** — (ಸರ್ವೋತ್ತಮನಿಗೆ) ನೀನs ಹೋಗಿ ಆಮಂತ್ರಣ ಕೊಟ್ಟು ಬಾ.

**ಢ** — ಅಲ್ಲಾ, ಅವರೊಬ್ಬರಿಗೇ ಹೇಳತೀರೋ ? ಮತ್ತ ಯಾರಿಗಾರs ಹೇಳತೀರೋ? ಎಷ್ಟು ಮಂದೀ ಅಂತ ಗೊತ್ತಾದರ ನೆಟ್ಟಗಾಗತದ ಮಾಡ್ಲಿಕ್ಕೆ. ಅಲ್ಲಾ, ಇಷ್ಟುಪರಿಯಿಂದ ಮಾಡ್ಯಾರ, ಮಟ್ಟ್ಯಾರ, ಅವರಿಗೂ—ಅವರ್ಯಾ

ರವರು ? ಮಲ್ಲಿಕನಾಥರಾಯರೋ ಏನೋ ಅದಲ್ಲ ಹೆಸರು, ಹೇಳತೀರೇನು ಮತ್ತ ? ಪಾಪ, ದೊಡ್ಡ ಮನುಷ್ಯರು !

ಕ — (ವಿಚಾರಿಸಿ) ಆಗಬಹುದು.

ಧ — ಇಲ್ಲಿ ನೋಡು ಸರೂ, ಹ್ಯಾಂಗಾದರೂ ಅಲ್ಲೀತನಕ ಹೋಗೆ ಹೋಗ್ತೀದಿ. ಆ ಅಂಜನಾಬಾಯಿಗೊಂದು ಹೇಳಿ ಬಂದುಬಿಡು, ನಾ ಹೇಳೀನಿ ಅಂತ. ಹುಡಿಗಿ, ಪಾಪ, ಹೊತ್ತಿಗೆಷ್ಟು ಆಗ್ಯೇದ ! ಕಂಡರ ಅಕ್ಕರತಿ ಬರೋ ಹಾಂಗ ಅದ.

ಕ — ಹಂ, ಹಂ, ಅಷ್ಟಕ್ಕs ಇರಲಿ ತಮ್ಮ ಅಕ್ಕರತಿ.

ಧ — ಹೂಂ, ನಿಮ್ಮದೂ ಒಂದು. ಏನಾರೆ ಅಂದರೇನಾತು ? ಅಂಥಾದ್ದೊಂದು ಹುಡಿಗಿ ನನ್ನ ಸರೂಗ ಸಿಕ್ಕರ ಮದಿವಿಮಾಡಿಬಿಡತಿದ್ದೆ. ಆದರೇನು ಮಾಡಬೇಕು, ಜಾತಿ, ಕುಲ ಒಂದವಲ್ಲ !

ಕ — (ಸರ್ವೋತ್ತಮನಿಗೆ) ನೀ ಹೋಗು ಹಂಗಾರ, ಹೇಳಿ ಬಾ.

[ ಸರ್ವೋತ್ತಮ ಒಳಗೆ ಹೋಗುವನು ]

ಕ — (ಧವಳಾಬಾಯಿಗೆ) ದೊಡ್ಡ ಶ್ಯಾಣ್ಯಾಕಿ ಇದ್ದೀದಿ ನೋಡು ! ಯಾರಿದ್ದಾಗ ಏನು ಮಾತಾಡಬೇಕು ಅಂಬೋದು ಒಂದಿಷ್ಟೂ ತಿಳಿಯೂದಿಲ್ಲ ನಿಮಗ !

[ ಸರ್ವೋತ್ತಮ ಕೈಚೀಲ ಹಿಡಿದುಕೊಂಡು ಒಳಗಿನಿಂದ
ಬಂದು ಹೊರಗೆ ಹೋಗುವನು ]

ಧ — ಮತ್ತ ಏನು ಮಾಡಬೇಕಂತೀರಿ ಫರಾಳಕ್ಕ ?

ಕ — ನಾಯೇನು ಹೇಳೋದು ? ನಿನಗ ತಿಳಿದದ್ದು ನೀ ಮಾಡಿದ ರಾಯಿತು. ಏನಾರೆ ಸಾಮಾನ ಬೇಕಾಗಿದ್ದರೆ ಹೇಳು, ಪ್ಯಾಟಿಗೆ ಹೋಗಿ ತಂದು ಕೊಡತೇನಿ.

ಧ — ನೋಡಿಕೊಂಡು ಹೇಳತೇನಿ ನಿಂದರ್ರಿ ಹಾಂಗಾರ.

[ ಅವಸರದಿಂದ ಒಳಗೆ ಹೋಗುವಳು ]

ಕ — ( ಹೊರಗೆ ಹೋಗುವದಕ್ಕಾಗಿ ತಯಾರಾಗಬೇಕೆಂದು ಕೋಟು ರುಮಾಲು ಇದ್ದ ಕಡೆಗೆ ಹೋಗುವಾಗ "ಉದರವೈರಾಗ್ಯವಿದು " ಎನ್ನುತ್ತ ಜಾಕೀಟು, ಕೋಟು, ರುಮಾಲು—ಒಂದರ ನಂತರ ಒಂದರಂತೆ ಹಾಕಿಕೊಳ್ಳುವರು.)

[ ತೆರೆಯಲ್ಲಿ ]

ಢ — ಉಪ್ಪಿಟ್ಟಿಗೆ ಹಾಕಲಿಕ್ಕೆ ಟೆಂಗಿನಕಾಯಿ, ಕೋತಂಬ್ರಿ, ಹಸೀ ಮೆಣಸಿನಕಾಯಿ, ನಿಂಬೀಹಣ್ಣು ಬೇಕು.

ಕ — (ಜಾಕೀಟು ಹಾಕಿಕೊಳ್ಳುತ್ತ) ಹುಂ, ಇನ್ನೊವ್ಮ್ಮೆ ಹೇಳು.

ಢ — (ಮತ್ತೆ ಹೇಳುವಳು)

ಕ — (ಅಂದುಕೊಂಡು ನೆನಪಿಟ್ಟುಕೊಳ್ಳುವನು)

ಢ — ಹಣ್ಣು-ಹಂಪಲಾ ಒಂದಿಷ್ಟು ತಗೊಂಬರ್ರಿ.

ಕ — ಯಾವು ತರಲಿ ?

ಢ — ಬಾಳೀಹಣ್ಣು, ಕಿತ್ತಲೀಹಣ್ಣು, ದ್ರಾಕ್ಷಿ, ದಾಳಂಬ್ರಿ ಸಿಕ್ಕರ.

ಕ — (ಕೋಟು ಹಾಕಿಕೊಳ್ಳುತ್ತ) ಹೂಂ. ಮತ್ತೇನು ತರಬೇಕು?

ಕ — ಇನ್ನೇನೂ ಬ್ಯಾಡ, ವುನ್ಯಾಗಿನ ವs ಹಪ್ಪಳ ಸಂಡಿಗಿ ಇಷ್ಟು ಕರೀತೀನಿ, ಆತ್ಯ.

ಕ — (ರುಮಾಲ ಸುತ್ತುತ್ತ) ಉತ್ತಮ ಆತು. ನಾ ಇನ್ನ ಪ್ಯಾಟಿಗೆ ಹೋಗಿಬರತೇನಿ?

ಢ — ಇಕಾ ಮರತೆ; ವಿಳೇದೆಲಿ, ಅಡಿಕಿ, ಲವಂಗ, ಯಾಲಕ್ಕಿಕಾಯಿ, ಪತ್ರಿ....

ಕ – (ಕೈಯಲ್ಲಿ ಬಡಿಗೆ ಹಿಡಿದು) ಮುಗೀತಿಲ್ಲೋ ಇನ್ನೂ ಯಾದಿ ? ನಾ ಬರ್ತೀನಿ.

ಢ — ಹೂಂsss.

[ ಹೋಗುವನು ]

— ತೆರೆ —

## ದೃಶ್ಯ ೨.

[ ಬಿದ್ದೂರಿನ ಒಂದು ಬೀದಿ ]

[ ಒಂದು ದಿಕ್ಕಿನಿಂದ ಮಾಚಣ್ಣಶೆಟ್ಟಿ ಬರುವನು ]

[ ತೆರೆಯಲ್ಲಿ ನಾಯಿ ಕೊಯ್ಯೊಯ್ಯೊ ಒದರಿದ ಸಪ್ಪಳ ]

**ಚಿ** — (ನಾಯಿ ಒದರಿದ ದಿಕ್ಕಿನಿಂದ ಗಾಬರಿಯಾಗಿ ಜಿಗಿದು ಬಂದು) ಹೆ, ಹೆ! ಏನ್ ತುಳಿದವರ್ಹಾಂಗs ಒದರತೀಯಲ್ಲ! ತುಳಿದಿದ್ದರಂತೂ ಏನು ಮಾಡತಿದ್ದ್ಯೋ ಏನೊ! "ಶಾಂತಾಕಾರಂ ಭುಜಗಶಯನಂ ಪದ್ಮನಾಭಂ ಸುರೇಶಂ...."

**ಮಾ** — (ಖೊಳ್ಳನೆ ನಕ್ಕು) ಏನ್ ಆಚಾರಸ್ವಾಮೀ, ತುಳಗಿಳದಿರೋ ಏನು ನಾಯಿನ್ನ? ಏಟ ಗಡತರ ಒದರಿತಲ್ಲ?

[ ಮಾಚಣ್ಣ ಬಂದ ದಿಕ್ಕಿನಿಂದ ಬಿಚ್ಚುನಾಥ ಬಂದು ನಿಲ್ಲುವನು ]

**ಚಿ** — ನಹಿ ನಹಿ ! ಪಾದಾಕ್ರಾಂತೇನ ಗುರ್ಗುರಾಯತೆ. ಕಿಂ ದೃಷ್ಟ ವಾನಸಿ? ಪ್ರತ್ಯಕ್ಷಂ ಪ್ರಮಾಣಂ.

**ಮಾ** — ಛೀಚೆಚೆಚ ! ಈ ಮಾತು ತಿಳಿಯಾಣೆಲ್ಲ ತಗೀರಿ ನಮಗ.

[ ಬಿಚ್ಚುನಾಥ ನಗುವನು ]

(ಬಿಚ್ಚುನಾಥನಿಗೆ) ರಾಯರ, ಆಚಾರಸ್ವಾಮೇರ ಮನೀಗೆ ಹೊಂಟಿದ್ವಿ. ಕರಿಸಿದ್ಹಾಂಗ ಇಲ್ಲೆ ಬಂದಾರು ನೋಡ್ರಿ. ಏನು ಕೇಳಿಕೊಳ್ಳೋದೈತಿ ಕೇಳಿಕೊಂಡು ಬಿಡ್ರಿ ನಿಚ್ಚಳಾಗಿ. ಮತ್ತ ಅವರೂ ಏನೋ ಮಾತs ಬ್ಯಾರೆ ಆಡಾಕ ಹತ್ಯಾರು.

**ಬಿ** — (ಸಮೀಪ ಬಂದು) ಹೌದು ಶೆಟ್ಟರೆ, ಏನಂಬೋದು ಒಮ್ಮೆ ಖಚಿತ ಆಗಿಬಿಡಲಿ.

**ಮಾ** — ಹಂ, ಹಾಗನ್ನರಿ. ಯ್ಯಾಪಾರ ಸರಳ ಇರಬೇಕು. ಪುಟ್ಟಾಪೂರಾ ಭರ್ಪೂರ ದಲಾಲಿ ಕೊಟ್ಟಮ್ಯಾಗ ಯಾ ಮಗಂದೇನು ಹಂಗು? ಜಳಾಜಳಾ ಕೇಳಬಿಡ್ರಿ. ಆಗಿಹೋಗ್ಲಿ.

**ಬಿ** — ಆಚಾರ್ಯಸ್ವಾಮಿ!

ಚಿ — ( ವಟವಟ ಮಂತ್ರೋಚ್ಚಾರ ಮಾಡುತ್ತ ನಿಲ್ಲುವನು )

ಬಿ — ಸ್ವಾಮೀ ! ನಮ್ಮದೆಲ್ಲಿಗೆ ಬಂತು ? ಈವರೆಗೂ ಯಾವದೂ ತಿಳೀಲಿಲ್ಲ ?

ಚಿ — ಕಸ್ತ್ವಂ, ಕಸ್ಯತ್ವಂ, ಕುತ ಆಯಾತಃ ?

ಮಾ — ಆಚಾರಪ್ಪನವರ, ಆ ಮಂತ್ರ-ಪಂತ್ರ ಕಟ್ಟಿಡ್ರಿ ಆಚೀಕ. ಈ ರಾಯರ ಕೆಲಸ ಏನಾಯ್ತು, ನಿಚ್ಚಳಾಗಿ ಹೇಳ್ರಿ ಒಂದೀಟು.

ಚಿ — ( ಕೈಸನ್ನೆಮಾಡಿ ) ಕಿಮರ್ಥಂ ಆಯಾತಸ್ತ್ವಂ ?

ಮಾ — ಜಳಾ ಜಳಾ ನಮ್ಮ ಕನ್ನಡದಾಗ ಮಾತಾಡ್ರಿ.

ಚಿ — ಕಿಮರ್ಥಮಾಗತಾಃ ಇತಿ ಪ್ರುಚ್ಛಾಮಃ

ಮಾ — ಅಲೆ ಇವನ, ಮತ್ತೂ ಅದನ್ನ ಅಂತಾನಲ್ಲೊ. ಅವೆಲ್ಲಾ ಹಚ್ಚಬ್ಯಾಡ ಈಗ. ನಮ್ಮ ರಾಯರ ರೊಕ್ಕಾನಾರ ಕೊಡು ಒಂದು; ಇಲ್ಲದಿದ್ದರ ಹುಡಿಗೀನಾರ ಗಂಟುಹಾಕು ಒಂದು.

ಚಿ — ಅಪಸರ್ಪಂತು ತೇ ಭೂತಾಃ ಏ ಭೂತಾ ವಿಘ್ನಕರ್ತಾರಃ

ಮಾ — ಮತ್ತೂ ಅದನs ! ರಾಯರ, ಒಂದು ಕೈ ನೋಡಿಬಿಡ್ರಿ, ಬಂದದ್ದು ನಾ ನೋಡಿಕೊಂತೇನಿ.

[ ಸರ್ವೋತ್ತಮ ಬರುವನು ]

ಸ — ಶೆಟ್ಟರ, ಶೆಟ್ಟರ, ತಡೀರಿ. ಹಾಂಗ್ಯಾಕ ಮೈಮ್ಯಾಲ ಏರಿ ಹೋಗತೀರಿ ? ಏನು ಜಗಳ ?

ಬಿ — ಅಲ್ಲಾ, ಏನೋ ಒಂದು ಕೆಲಸ ಮಾಡಿಕೊಡತೇನಿ ಅಂತ ನಮ್ಮ ಹತ್ತಿರ ಮಾತಾಡಿಕೊಂಡು ಹೋದ ಬ್ರಾಹ್ಮಣ, ತಿರಿಗಿ ನಮಗ ಮುಖಾ ಕೂಡ ತೋರಿಸದೆ, ಈಗ ಭೆಟ್ಟಿಯಾದಾಗ, ಏನೋ ಸಹಜವಾಗಿ, ' ಏನಾಯಿತು ನಮ್ಮ ಕೆಲಸ ? ' ಅಂತ ಕೇಳಿದರೆ ಉತ್ತರಾನೂ ಕೊಡದೆ ಹಾಗೇ ಏನೇನೋ ಗೊಣಗುಟ್ಟಿಕೊಂಡು ಹೊರಟುಹೋಗುವದರಲ್ಲಿದ್ದರು. ನಮ್ಮ ಶೆಟ್ಟರಿಗೆ – ಪಾಪ, ಸತ್ಯವಂತರು ಅವರು – ಇದನ್ನ ಸಹಿಸೋದಿಕ್ಕೆ ಆಗಲಿಲ್ಲ.

ಮಾ — ( ಬಿಚ್ಚುನಾಥನನ್ನು ದುರುಗುಟ್ಟಿ ನೋಡುವನು )

ಬಿ — ಅವರಿಗೂ ಇವರಿಗೂ ಖಾಡಾಖಾಡಿಗೆ ಬಂದುಬಿಟ್ಟಿತು. ಅಷ್ಟರಲ್ಲಿಯೇ ತಾವು ಬಂದುಬಿಟ್ಟರಿ. ಒಳ್ಳೇದೇ ಆಯಿತು.

ಮಾ — ಯ್ಯಾಪಾರ ಸರಳ ಇರಬೇಕು. ಎದುರಿಗೆ ಬಂದು ಮಾತಾಡಿಸಿದರ 'ಸರ್ಪಾ ಭೂತಾ' ಅಂತ ಮಂತ್ರಾ ಅನ್ನಾಕ ಹತ್ತಿದರ ವ್ಯವಹಾರಸ್ಥರು, ಹ್ಯಾಗ ತಡೀಬೇಕು ನೀವs ಹೇಳ್ರಿ.

ಸ — ಏನು ಆಚಾರ, ನೀವೇನಂತೀರಿ ?

ಚಿ — ಕಸ್ತ್ವಂ, ಕಿಮಾಯತಃ ಇತಿ ಪ್ರುಚ್ಛಾಮಃ

ಮಾ — ಏನಂತಾರ್ರೀ ಆಚಾರು ?

ಸ — "ತಾವು ಯಾರು ? ತಾವು ಬಂದ ಕಾರ್ಯವೇನು?" ಅಂತಾರ.

ಮಾ — ಹೀಗ ಕೇಳಿದರ್ರೀ ? ನಿಂದರ್ರಿ ಹಾಗಾರ, ಹೇಳ್ತೀನಿ ಉತ್ತರಾ. (ಸಾಭಿನಯವಾಗಿ) ಓಹೊ ! ನಾವು ಬಂದಂಥವರು ಧಾರು ಎಂದು ನಮ್ಮನ್ನು ಕೇಳುವಂಥವರಾದ ತಮಗೆ ನಾವು ಧಾರೆಂದು ಹೇಳುತ್ತೇವೆ; ಕೇಳುವಂಥವರಾಗಬೇಕು. ಹಲ ! ಹಲಲಲಲಲ ಶಾಬ್ಬಾಸ್ ! ನಾವು ಯಾರೆಂದರೆ – ಅತಳ ವಿತಳ ಸುತಳ ಪಾತಾಳ ತಳಾತಳ ಮಹಾತಳ ಭೂತಳಗಳಲ್ಲಿ, ಅಮೇರಿಕಾ ಖಂಡ, ಯುರೋಪಖಂಡ, ಆಫ್ರಿಕಾಖಂಡ, ಆಸಿಯಾ ಖಂಡಗಳಲ್ಲಿ ಭರತ ಖಂಡವೆನಿಸಿ ಪ್ರಚಂಡವಾಗಿ ಮೆರೆಯುವ ಉದ್ದಂಡ ಇಂಡಿಯಾ ದೇಶದಲ್ಲಿ ಬಂಗಾಳ ಬಿಹಾರ ಕಾಶ್ಮೀರ ಪಂಜಾಬ ರಜಪೂತಸ್ಥಾನ ಮುಂಬೈ ಮೈಸೂರು ಹೈದರಾಬಾದ ಮದ್ರಾಸ ಕರ್ನಾಟಕದಲ್ಲಿ ತಿರುಪತಿಯ ಸಾಮಿಪ್ಯ ಪಡೆದ ತಿರಗಲಿ ಕಾಲೇಜದ ಪ್ರಿನ್ಸಿಪಲ್ಲನೆಂದು ಹೆಸರುಗೊಂಡು ಹೆಚ್ಚಿನವರಂ ಬೆಚ್ಚಿಸಿ ಅಚ್ಚರಿಯಿಂ ಬೆರಳ ಕಚ್ಚಿಸಿ ಬಿಡುವಂಥ ಬಿಚ್ಚುನಾಥನೆಂಬಭಿದಾನದಿಂ ಮೆರೆವವನ ಸೂತ್ರಧಾರ ನಾನೆಂಬುದನ್ನು ಅರಿಯಾ, ಸೋಗಿನಾಚಾರ್ಯಾ !

[ ಸರ್ವೋತ್ತಮ ಬಿಚ್ಚುನಾಥ ನಗುವರು ]

ಸ — ಏನು ಶೆಟ್ಟರೆ, ದೊಡ್ಡಾಟ ಮಾಡಿಬಿಟ್ಟಿರಲ್ಲ ! ಏನಿದು ?

ಮಾ — ಹಾಗ ಕೇಳೋವರಿಗೆ ಹೀಗ ಹೇಳೋದs ಬರೋಬ್ಬರಿಯೇಳ್ರಿ.

ಸ — ( ಆಚಾರ್ಯರಿಗೆ ) ನೀವು ಸುಮ್ಮನೆ ಕನ್ನಡದಲ್ಲಿ ಮಾತಾಡಿಬಿಟ್ಟಿದ್ದರ ಈ ಅನರ್ಥಪರಂಪರಾನs ತಪ್ಪಿಬಿಡುತಿತ್ತು.

ಚಿ — ಸ್ನಾನಾನಂತರಂ ಶುಚಿರ್ಭೂತೆ ಸಮಯೆ ಅಪವಿತ್ರಾ ಕರ್ನಾಟಕ ಭಾಷಾ ನ ವಕ್ತವ್ಯಾ. ತಸ್ಮಾತ್ ಕಾರಣಾತ್ ತಾಂ ಪರಿತ್ಯಜ್ಯ ಪವಿತ್ರಾಂ

ಇಮಾಂ ಗೀರ್ವಾಣಭಾಷಾಯಾಂ ಅರ್ಥಾತ್ ದೇವಭಾಷಾಯಾಂ ಸಂಸ್ಕೃತಾಯಾಂ ಪ್ರವಚಾಮಃ

**ಮಾ** — ಮತ್ತೂ ಏನೋ ಅಂತಾರಲ್ರೀ ಆಚಾರು ?

**ಸ** — "ಸ್ನಾನ ಮಾಡಿದ ನಂತರ ಮಡಿಯೊಳಗಿದ್ದಾಗ ಅಪವಿತ್ರವಾದ ಕನ್ನಡ ಭಾಷೆಯನ್ನು ಮಾತಾಡತಕ್ಕದ್ದಲ್ಲ. ಆದ್ದರಿಂದ ಅದನ್ನು ಬಿಟ್ಟು ಪವಿತ್ರವಾದ ದೇವಲೋಕದ ಭಾಷೆಯಾಗಿರುವ ಸಂಸ್ಕೃತದಲ್ಲಿ ಮಾತಾಡುತ್ತೇವೆ." ಅಂತಾರ.

**ಮಾ** — ಹೀಗ ಐತ್ರಿ ಇದರರ್ಥ ? ಬಲು ತಾರಾತಿಗಿಡಿ ಬಿಡ್ರಿ ! ಘನ ಮಲಕು !

**ಬಿ** — ನಮ್ಮ ಕೆಲಸಾ ಮಾಡಿದರೇನೋ ಕೇಳ್ರಿ.

**ಚಿ** — ಗೃಹಮಾಗಚ್ಛತಾಂ ಮಧ್ಯಾನ್ಹೆ.

**ಸ** — ಮಧ್ಯಾನ್ಹದಾಗ ಮನಿಗೆ ಬರಲಿಕ್ಕೆ ಹೇಳತಾರ.

**ಮಾ** — ಈಟ ದಿವಸ ಠಕ್ಕ ಹಚ್ಚಿ ತಪ್ಪಿಸಿದವ, ಈಗ ಬಿಟ್ಟರ ಇನ್ನ ಕೈಗೆ ಸಿಗತಾನ್ರೀ ? ಬಿಡಾಣಿಲ್ಲ ತಗೀರಿ ( ಅಡ್ಡಗಟ್ಟಿ ನಿಲ್ಲುವನು )

**ಚಿ** — ( ಹಿಂದಕ್ಕೆ ಸರಿದು ) ಆಂ! ಅಸ್ಪೃಶ್ಯೋಹಂ, ಅಸ್ಪೃಶ್ಯೋಹಂ !

[ ಬಿದ್ದಾಡಿ ಶಾಂತಣ್ಣ ಬರುವರು ]

**ಸ** — ಅಸ್ಪೃಶ್ಯರು ! ತಾವು ! ಎಂದಿನಿಂದಾದಿರಿ?

**ಚಿ** — (ಶಾಂತಣ್ಣನನ್ನು ನೋಡಿ) ಆಃ ! ಶಾಂತಂ ಪಾಪಂ, ಶಾಂತಂ ಪಾಪಂ.

**ಬಿ** — ಇಬ್ಬರೂ ಅಸ್ಪೃಶ್ಯರೇ ಅಲ್ಲ.

**ಚಿ** — ಎನ್ ರಾಯರ, ಏನ್ ಮಾತಾಡತೀರಿ ? ನಾ ಅಸ್ಪೃಶ್ಯನಾ ?

**ಬಿ** — ಈಗ ನೀವಾ ಹೇಳಿದಿರಲ್ಲ ಸ್ವಾಮಿಾ.

**ಚಿ** — ಹಾಗಲ್ಲ ನಾನಂದದ್ದು. ಮಡಿಯಲ್ಲಿದ್ದೇನೆ, ಮುಟ್ಟತಕ್ಕದ್ದಲ್ಲ ಎಂದೆ.

**ಮಾ** — ಏನಾ ಅನ್ರಿ; ಮಾತು ತಿಳ್ಯಾಕ ಹತ್ತಿದವು ಸಾಕು.

**ಸ** —( ಆಚಾರ್ಯರಿಗೆ ) ಇಲ್ಲಿ ನೋಡ್ರಿ, ತಾವು ಮಡಿಯಿಂದಿದ್ದಾಗ ಮಾತ್ರ ಅಸ್ಪೃಶ್ಯರು. ಹೌದೋ ಅಲ್ಲೋ ?

**ಚಿ**— ಹುಂ, ಹೌದು.

**ಸ** — ( ಶಾಂತಣ್ಣನನ್ನು ತೋರಿಸಿ ) ಇವನು ಯಾವಾಗಲೂ ಅಸ್ಪೃಶ್ಯ. ಅಂದರೆ ಯಾವಾಗಲೂ ಮಡಿಯುವನೆ ಅದಂತಾಯಿತಲ್ಲ!

**ಚಿ** - ಏನು ಅಪದ್ಧಮುಂಡೇದ್ದೇ, ಹಾಂಗೆಲ್ಲ ಅನರ್ಥ ಮಾಡಿದರೆ? ಹಾಂಗೆಲ್ಲಾ ಮಾಡಬಾರದು. ಮಾಡಿದರ ಅಂಧಂತಮನಸ್ಸಿಗೆ ಹೋಗತಾರ.

[ ಶಾಂತಣ್ಣ ದೂರ ಹಾಯ್ದು ಹೋಗುವನು. ]

**ಸ** — ಆಚಾರ, ಬರಿ ಬೈದರ ನನ್ನ ಮಾತಿಗೆ ಉತ್ತರಾ ಕೊಟ್ಟಾಂಗ ಆಗಲಿಲ್ಲ.

**ಚಿ** — ಹಂ ಹಂ ಹಂ, ಅದಃ, ಶಾಸ್ತ್ರಾದ್ಯೂಧ್ವಿರ್ಬಲೀಯಸೀ.

**ಮಾ** — ಅಜ್ಜ ಆರು ತೆಲಿ, ಮುತ್ಯಾ ಮೂರು ತೆಲಿಯಿಂದ ನಡ ಕೊಂತ ಬಂದದ್ರಿ ಈ ಶೀಲ. ಅವರನ್ನ ಮುಟ್ಟಿದರ ಹ್ಯಾಗ ಉಳಿದೀತ್ರಿ ಶೀಲ?

**ಬಿದ್ದ** — ಇಲ್ಲ್ನೋಡ್ರಿ ಯಪ್ಪಾ, ಡಾಣಾಡಂಗರ ಯಾರೂ ಮುಟ್ಟಿಸಿ ಕೊಳ್ಳಾಣಿಲ್ರೀ. ಆ ಮುಟ್ಟಿಸಿಕೊಳ್ಳೊ ಹೊತ್ತಃ ಬ್ಯಾರೆ ಐತ್ರಿ. ( ಶೆಟ್ಟಿಯನ್ನು ಅರ್ಥಪೂರ್ಣವಾಗಿ ನೋಡುವನು. ಶೆಟ್ಟಿ ಕಣ್ಣು ಕಿಸಿಯುವನು ) ಕಣ್ಣು ಏನ್ ಕಿಸೂತೀ ಕಣ್ಣು! ಇದೆಲ್ಲಾ ಹೇಳಿಬ್ಯಾಡ್ರಿ ಡಂಬಾಚಾರಾನ. ರಾತ್ರಿ ಕಳವಲಿ ಹೋಗಿ ಹೊಲೇರ ಹೆಣ್ಣು........

**ಮಾ** — ಏಯ್!

**ಬಿದ್ದ** — ಇರಲೇಳಪೊ. ಅಷ್ಟ್ಯಕ ಬಾಯಿ ತಗೀತಿ. ದೊಡ್ಡ ದೊಡ ಸೆಟ್ಟಿ-ಸಾವಕಾರ್ರು, ಆಚಾರು-ಅಮಲ್ದಾರು, ಒಬ್ಬರಃ, ಇಬ್ಬರಃ ರಾತ್ರಿ ನೋಡ್ರಿ, ಎಲ್ಲಾ ಏಕಾಕಾರ!

**ಚಿ** — ಸರ್ವೋತ್ತಮರಾಯರ, ಅಂತೂ ತಮ್ಮ ಅಭಿಪ್ರಾಯ ತಿಳಿ ಧಾಂಗ ಆಯಿತು. ರಾಯರಿಗೆ ನಿವೇದಸ್ತೀನಿ ಇದನ್ನ.

**ಸ** — ಓಹೊ. ನೀವು ಇದನ್ನ ನಿವೇದಿಸರಿ, ನಾ ಆದನ್ನ ನಿವೇದಿಸತೀನಿ.

**ಚಿ** — (ತಿರುಗಿ ಬಂದು) ಆಂ, ಏನು? ಆದನ್ನ ಅಂದರ ಯಾವದನ್ನ?

**ಸ** — ಇವರ ಕೆಲಸಾ ಏನೋ ಹಿಡಿದೀರಲ್ಲ.... ಅದು.

**ಚಿ** — ಛೆಛೆಛೆ ಚೆಚೆಚೆ ನಾಯೇನೂ ಹಿಡಿದಿಲ್ಲ.

ಮಾ — ಯಾಕ್ರಿ ಆಚಾರs, ಚಂಚಗಾರ ತಗೊಂಡು ಈಗ ಬಾಯಿ ಬಡೀತೀರೇನು ? ಯಾಪಾರಾ ಸರಳ ಇರಬೇಕ್ರಿ.

ಚಿ — ಮನಿಗೆ ಬರ್ರಿ, ನಿಮ್ಮ ಚಂಚಗಾರ ನಿಮ್ಮ ಮಾರೀ ಮ್ಯಾಲ ಒಗೀತೇನಿ. ( ಸಿಟ್ಟಿನ ಆರ್ಭಟಿಯಿಂದ ಹೊರಟುಹೋಗುವನು )

ಸ — ಈಗ ತಿರಿಗಿ ಕೊಟ್ಟರೂ ಇಸಕೊಂಡದ್ದೇನು ಸುಳ್ಳಾಗೂದಿಲ್ಲ.

ಮಾ — ಈಟೆಲ್ಲ ಮಂದಿಗೆ ಒಳೆ ಕೈಕೊಟ್ಟು ಹೋದರಲ್ರೀ ಆಚಾರು ! ಸಾಹೇಬರ, ಇದs ಹೊತ್ತು. ಈ ಕಾಪಿನಾಗs ಆಚಾರ್ರ ಮನೀಮಟಾನೂ ಹೋಗೇ ಬಂದುಬಿಡೋಣ ನಡೀರಿ. ಬರ್ತೇವ್ರಿ ರಾಯರ, ಶರಣು.

[ ಬಿಚ್ಚುನಾಥ, ಶೆಟ್ಟಿ ಒಂದು ಕಡೆಗೆ ಹೋಗುವರು. ಬಿದ್ದಾಡಿಯನ್ನು ಸುಟ್ಟು ಬಿಡುವಂತೆ ನೋಡುವನು ಶೆಟ್ಟಿ. ಬಿದ್ದಾಡಿ ಅಣಕಿಸಿ, ನಕ್ಕು ಹೋಗುವನು. ]

ಸ — ಎಲ್ಲಿಗೆ ಇಳಿದಿದೆ ಸಮಾಜ ! ಧರ್ಮ !

## ಸೀಸಪದ್ಯ.

ಪತಿತರಾದರೆ ಪಾರ್ವರತಿ ಹೀನ ವೃತ್ತಿಗೆಳಸುತೆ ಸೇವೆಯಂ ಮಾಡಿ ಬಾಳ್ವರಲ್ಲೆ ?<br>
ಶ್ರುತಿಸ್ಮೃತಿಶಾಸ್ತ್ರಗಳನ್ನೋದರೆ, ಕಲಿತು ವರಜನಕೆ ಕಲಿಸರೆ<br>
ಮತ್ತವರಕರ್ತವ್ಯವಲ್ಲೆ ?<br>
ಸತತ ಪರಹಿತದೊಳುಪಕೃತಿಗೈದು ದೇವರೊಳು ಮನವಿಡದೆ<br>
ಆಸೆ ಬಿಡರೆ ದ್ರವ್ಯದಲ್ಲೆ<br>
ಪ್ರಥಿವಿಯೊಳಗಿವರೆ ಶೂದ್ರರಲ್ಲೆ ? ಮತ್ತಾರು ? ನಿಜಬ್ರಾಹ್ಮಣರು<br>
ಮತ್ತೆಲ್ಲಿ ಇಲ್ಲೆ ?

[ ಹೋಗುವನು ]

ತೆರೆ

## ದೃಶ್ಯ ೩.

[ ಅಂಜನಾಬಾಯಿಯ ಮನೆಯ ಕೋಣೆ ]

**ಚೆ** — (ಒಂದು ಕೈಯಲ್ಲಿ ಪುಸ್ತಕ ಇನ್ನೊಂದು ಕೈಯಲ್ಲಿ ಕಸಬರಿಗೆ ಹಿಡಿದು ಕೊಂಡು ಕಸಗೂಡಿಸುತ್ತ ) ಬಿ. ಎ. ಡಿ. ಬ್ಯಾಡ ಅಂದರ ಕೆಟ್ಟ. ಸಿ. ಎ. ಟಿ. ಕೆಟ್ಟ್ ಅಂದರ ಬೆಕ್ಕು.

[ ಬಿದ್ದಾಡಿ ಬಂದು ಹಿಂದೆ ನಿಂತು ನೋಡುತ್ತಾನೆ ]

**ಬಿದ್ದ** — ಚೆನ್ನೀs

**ಚೆ** — (ತಿರುಗಿ ನೋಡಿ ಮಾಗು ಮುರಿದು ಮತ್ತೆ ಕಸಗೂಡಿಸುವಳು)

**ಬಿದ್ದ** — ಯಾಕ ಮಾತಾಡಾಣಿಲ್ಲೇನು ?

**ಚೆ** — ಹುಂ, ಏನು ಹೇಳು.

**ಬಿದ್ದ** — ಬಾಯೋರು ಇಲ್ಲೇನು ಮನ್ಯಾಗ ?

**ಚೆ** — ರಾಯರು ಅವರೂ ಕೂಡೇ ತೋಟದ ಬಾವೀಕಡಿಗೆ ಹೋಗ್ಯಾರು ಇದs.

**ಬಿದ್ದ** — ರಾಯರು ಬಂದರೇನು ?

**ಚೆ** — ಬಂದಾರು.

**ಬಿದ್ದ** — ಬಂದಾರs ! ಪಾಡಾತು ಬಿಡು. ಚೆನ್ನೀs ! (ಮುಖ ಸಪ್ಪಗೆ ಮಾಡುವನು )

**ಚೆ** — ಯಾಕ ?

**ಬಿದ್ದ** — ಹೊಟ್ಟಿ ಬಲು ಹಸಗೊಂಡೈತಿ. ಏನಾರ ಕೊಡತಿಯಾ ರೊಟ್ಟಿಪಟ್ಟಿ ?

**ಚೆ** — ಯಾವಾಗ ಬಂದರೂ ಹೊಟ್ಟಿ ಹೊಟ್ಟಿ ಅಂತs ಬಡಕೊಂತೀ ಯಲ್ಲ !

**ಬಿದ್ದ** — ಮತ್ತ ಏನು ಮಾಡಂದಿ ಚೆನ್ನಿ ? ಯಕ್ಕ ಇರೋತನ ಬೇಕ ಬೇಕಾದ್ದು ತಿಂದು ಸೆವಿಗಂಡೈತಿ ಈ ಹೊಟ್ಟಿ. ಆಕಿ ಹೋದ್ಲು ಹೊದ್ಲು,

ಪಾಪ, ಈಗ ಪರದೇಶಿ ಆಗಿಬಿಟ್ಟೈತಿ! ನೀನಾರನ ನೋಡಿಕೊಂಡೀ ಅಂದರ, ನೀನೂ ನಿನ್ನ ಓದಿಕ್ಯಾಗ ಬಿದ್ದುಬಿಟ್ಟೀದಿ. ಯಾರು ಕೇಳಬೇಕು ಅದನ್ನ?

**ಚೆ** — ಅಷ್ಟು ಸಿವಿಗಲಸಬಾರದು ಅದಕ್ಕ.

**ಬಿದ್ದ** — ಕೇಳತೈತೇ ಅದು? ಚೆನ್ನೀ! ಬಿಸಿ ರೊಟ್ಟೀ ಕಾಣದ ಅಂತೂ ಏಟ ದಿನಾ ಆತೋ ಏನೋ! ನಮ್ಮದೂ ನಸೀಬ ಕೆಟ್ಟ ಐತಿ. ಯಾರೇನು ಮಾಡಬೇಕು? ನಮ್ಮಕ್ಕ ಹೋದ್ಲು, ಆಕಿ ಹಿಂದಿಂದ ಎಲ್ಲಾ ಹೋಗಿಬಿಟ್ಟವು!

**ಚೆ** — ದಿನಾ ಬಂದ್ಹಾಂಗ ನಡೀಬೇಕೊ ಮಾವಾ.

**ಬಿದ್ದ** — ಹೌದು ನೋಡು ನನ ಸೊಸಿಯೇ. ಬೇಶ್ ಹೇಳತಿ. ಈ ಇಂಗ್ರೇಜಿ ಕಲಿಯಾಕ ಹತ್ತಿದಾಗಿನಸೊಟ್ಟು ನಿನ್ನ ಶೆಲೀನೂ ಬ್ಯಾರೆ ಆಗ್ಯೆತಿ ತಗಿ! ಚೆನ್ನೀ, ಈಟ ಒಡಬಡಕೊಂಡು ಬಡಬಡಕೊಂಡು ಕಲೀತೀದಿ, ಕಲ್ತಾರ ಏನ್ ಮಾಡಾಕಿ ಆದೀ?

**ಚೆ** — ಕಲ್ತು ನರ್ಸು ಆಕ್ಕೇನಿ ನರ್ಸು!

**ಬಿದ್ದ** — ಅಂ! ನರಸ ಅಂದರೇನೂ ತುರಸ!

**ಚೆ** — ಆಸ್ಪತ್ರ್ಯಾಗ ಬ್ಯಾನಿಯುವರಿಗೆ ಆರೈಕಿ ಮಾಡೂದು. ತಿಂಗಳಿಗೆ ನಾಲ್ವತ್ತು ರೂಪಾಯಿ ಸಂಬಳ ಸಿಗತೈತಿ.

**ಬಿದ್ದ** — ಅಂಹಾ! ಆದಕ್ಕಂಡೂ ಈಗಿಂದ ಬಿಳೀ ಸೀರಿ ಉಡಾಕ ಹತ್ತೀದಿ ಅನ್ನು. ಮನಿ ಬಿಟ್ಟು ಈ ಬಾಯರ ಮನೀಗೆ ಬಂದೀದಿ, ಬಂದೀದಿ, ಎಲ್ಲಾ ಆಡತರಾ ಹಿಡಿದಬಿಟ್ಟೀದಿ. ಅದೇನು ಕಡೆಪೂರೈಸೋ ಮಾತಲ್ಲ ಚೆನ್ನೀ, ನೆಪ್ಪಿಡು.

**ಚೆ** — ನಿನಗೇನ್ ತಿಳೀತೈತಿ ಅದರಾಗ? ಸುಮ್ಮಾಕ ಕುಂದ್ರು.

**ಬಿದ್ದ** — ನನಗೇನು ತಿಳ್ಯಾಕಿಲ್ಲ ಬಿಡು. ಆದರ ಈಟು ಮಾತ್ರ ತಿಳೀತೈತಿ, ನೀ ಇನ್ನ ನಮ್ಮ ಕೈ ಬಿಡಾಕೀ ಅನ್ನೋದು. ಚೆನ್ನೀ....

(ಏನೋ ಹೇಳುವದನ್ನು ತಡೆಯುವನು)

**ಚೆ** — ಏನು? ಕೈಬಿಡಾಕ ಹಿಡಿದಿದ್ನೆಲ್ಲೆ?

**ಬಿದ್ದ** — ಹೋಗಲಿ ಬಿಡು. ಇನ್ನ ರಾಯರಂತೂ ಬಂದರು. ನಾವು

ನಮ್ಮ ಮನೀಗೆ ಹೋಗೋಣು ಇನ್ನು. ಚೆನ್ನೀs.... ( ಏನೋ ಹೇಳುವವನ್ನು ತಡೆಯುವನು )

**ಚೆ** — ಹುಂ, ಅಂಜವ್ವನವರು ಬಂದವ್ಯಾಗ ತಿಳಿಸಿ ಹೋಗೋಣು.

**ಬಿದ್ದ** — ಹಗಾರ ಎಲ್ಲಾ ಜ್ವಾಡ್ನಿ ಸಜ್ಜು ಮಾಡಿಕೊಂಡಿಡು. ಅವರು ಬಂದಗಳಿಗ್ಗೆ ಹೊರಡೋಣು. ಚೆನ್ನೀs ( ಮತ್ತೆ ಏನೋ ಹೇಳೂವವನ್ನು ತಡೆದು ನೋಡುತ್ತ ನಿಲ್ಲುವನು )

**ಚೆ** — ಅಯ್ಯ! ಹೀಗ್ಯಾಕ ನೋಡಿಕೊಂತ ನಿಂತೀ, ದುರಗವ್ವ ಬಡದವರಹಾಂಗ! ಏನಾರ ಹೇಳೋದಿದ್ದರ ಮಾತಾಡು. ಸುಮ್ಮಾಕ ಹಾಗ ನೋಡಿಕೊಂತ ನಿಂತರ ಏನು ತಿಳೀಬೇಕು ?

**ಬಿದ್ದ** — ( ಹೇಳಬಾರದೆಂದು ನುಂಗಿಕೊಂಡು ) ಏನಿಲ್ಲೇಳು. ನಮ್ಮ ಆಫೀಸಿನಾಗ ಇತ್ತಿತ್ತಾಗ ಒಂದೀಟು ಏನೋ ಬ್ಯಾರೆ ರಂಗs ಕಾಣಾಕ ಹತ್ತ್ಯೈತ್ಯೇ. ಆವಸ್ಕs ತೆಲಿ ಒಂದೀಟು ಗದ್ಲಕ್ಕ ಬಿದ್ದಿತ್ತs....

**ಚೆ** — ( ನಗುತ್ತ ) ನಿನ್ನ ತೆಲಿ ಸಮಾ ಎಂದಿತ್ತು ?

**ಬಿದ್ದ** — ಏs ! ನಗಬ್ಯಾಡ ಹಾಗ. ಒಂದೀಟು ಕೇಳು : ನಮ್ಮ ರಾಯರು, ಆ ಶೆಟ್ಟಿ ಕೂಡಿ ಏನೋ ಒಂದು ಕಂತ್ರಾಟ ಹೂಡಿಧ್ಹಾಂಗ ಕಾಣತೈತಿ. ಶೆಟ್ಟೀ ಹಿಂದ ಆವನ ವ್ಯಾಳಾನೂ ಎಲ್ಲಾ ಕೂಡ್ಯೈತಿ. ನಾಟಕ ಕಂಪನಿ ಷಡಕ್ಷರಿ, ಪಂಚಾನನಯ್ಯ, ಆ ಆಚಾರಿ ಎಲ್ಲಾರೂ ಆ ಬಲ್ಯಾಗ ಬಿದ್ದಾಂಗ್ಯೈತಿ. ಇಂದ ಆ ಶಾಂತಣ್ಣನ್ನೂ ಕರಿಸಿಗೊಂಡಿದ್ದ ನಮ್ಮ ರಾಯ. ಮತ್ತ ಏನೋ ಒಳೆ ಗುಟ್ಟಿನಾಗ ಮಾತು ನಡೆದಿದ್ದವು. ಆದರಾಗ " ಆ ಹುಡಿಗಿ.... ಆ ಹುಡಿಗಿ... ಹೀಗ ಸಾಧಿಸಿದರೂ ಸೈ ಹಾಗ ಸಾಧಿಸಿದರೂ ಸೈ...." ಈಟೆ ನನಗ ಕೇಳಿಸಿದವು. ನಾನೂ ಸೂಕ್ಷ್ಮ ತಿಳಕೊಂಡೀನಿ. ನಮ್ಮ ಆಂಜನವ್ವನ ವ್ಯಾಗ ಆವರು ಹೊಂಚಿಟ್ಟ್ಯಾಂಗ ಕಾಣತೈತಿ.

**ಚೆ** — ಅಂ ! ಅವರ ಓಸುರಿಲಿ !

**ಬಿದ್ದ** — ಒಂದೀಟು ನೆಜರಿಟ್ಟು ನಡಿ. ನಮ್ಮ ಬಿಚ್ಚುನಾಥಪ್ಪ, ಅವ ಚುಚ್ಚುನಾಥಪ್ಪ ! ಬಲು ಸೆವಿ ಮಾತು. ಕೂದಲೆಳೀಲೆ ಉರುಲು ಹಾಕಾಂವ. ಆವನ ಗುಟ್ಟೆಲ್ಲ ನನಗ ತಿಳದೈತಿ. ಅಂತs ನಮಗ ಮನೀಗೆ ಆಪ್ಪಣ್ಣಿ ಕೊಟ್ಟಾನು.

ಚೆ — (ಬಾಗಿಲ ಕಡೆಗೆ ನೋಡಿ) ಬಾಯರು ಬಂದರು ಕಾಣತೈತಿ.

ಬಿದ್ದ — ನಡಿ ಹಾಗಾರ ಸಜ್ಜುಮಾಡಿಕೊಳ್ಳೋಣು.

[ಗಡಿಬಿಡಿಯಿಂದ ಒಳಗೆ ಹೋಗುವರು]

[ಅಂಜನಾ ಒಗೆದ ಒದ್ದೆಬಟ್ಟೆಗಳನ್ನು ಹಿಡಿದುಕೊಂಡು ಬರುವಳು]

ಅಂ — ಎಲಾ! ಯಾರೂ ಇಲ್ಲಲ್ಲ! ಚೆನ್ನಮ್ಮಾ!

[ಒಳಗೆ ಹೋಗಿ ಬಟ್ಟೆ ಇಟ್ಟು ಬರುವಳು]

ಚೆ — (ಬಂದು ನಿಲ್ಲುವಳು)

ಅಂ — ಎಲ್ಲಿ ಹೋಗಿದ್ದೆ ಚೆನ್ನಮ್ಮಾ?

ಚೆ — ಜ್ವಾಡ್ನಿ ಸಜ್ಜುಮಾಡಿಕೊಣ್ಣಾಕ ಹೋಗಿದ್ದೆನ್ರಿ.

ಅಂ — ಯಾಕ?

ಚೆ — ಮಲ್ಲಪ್ಪರಾಯರು ಊರಿಂದ ಬಂದರಲ್ರಿ. ನಾವಿನ್ನ ನಮ್ಮ ಮನೀಗೆ ಹೋಕ್ಕೇವ್ರಿ.

ಅಂ — ಅದಕ ಇಷ್ಟು ಯಾಕ ಅವಸರ? ನಾಳೆ ಹೋಗಬಹುದು, ನಾಡದ ಹೋಗಬಹುದು. ಮಾಮಾನೂ ಬರತಾರ ನಿಂದ್ರು ಈಗ. ಅವರನ್ನೂ ಕೇಳೋಣ.

[ಬಿದ್ದಾಡಿ ಬರುವನು]

ಬಿದ್ದ — ಹೌದರಿ, ಅಪ್ಪನವರು ಬರೂಮಟ ನಿಮ್ಮ ಸಂಗಾಟ ಯಾರೂ ಇಲ್ಲ ಅಂತ ನಮಗ ಇಲ್ಲಿ ಇರ್ರಿ ಅಂತ ಹೇಳಿದ್ದರು. ಅವರು ಬಂದುಬಿಟ್ಟರು. ಮತ್ತ ಇನ್ನ ನಾವು ನಮ್ಮ ಮನೀಗೆ ಹೋಕ್ಕೇವ್ರಿ. ಆದರ ಯಾವಾಗ ಕರೀತೀರಿ ಆವಾಗ ಮತ್ತ ಬರತೇವ್ರಿ. ನಿಮ್ಮ ಉಪಕಾರ ಗಣ ಆತರಿ ನಮ್ಮಮ್ಯಾಗ!

ಅಂ — ಇದರಾಗ ಉಪಕಾರ ಯಾತರದು ಬಿದ್ದಾಡೆಪ್ಪ.

ಬಿದ್ದ — ಈಟು ಯಾರು ಮಾಡತಾರ ತಗೀರಿ ಈಗಿನ ದಿವಸದಾಗ! ಹಡದ ತಂದಿನ್ನೂ ನೋಡೂದಿಲ್ಲರಿ.

ಚೆ — ಯವ್ವಾ! ಎಂಥಾ ದೊಡ್ಡ ಮನಸ್ಸರಿ ನಿಮ್ಮದು! ಜೋಲಿ ಹೋಗವರ ಜೋಲೀ ಹಿಡಿದಿರಿ. ದಾರಿ ತೋರಿಸಿಕೊಟ್ಟರಿ. ಬುದ್ಧಿ ಹೇಳಿದಿರಿ.

ಮುರುವಾದಿಯಿಂದ ಬಾಳೇವು ಮಾಡಾಕ ಕಲಿಸಿಕೊಟ್ಟಿರಿ. ಹೊಟ್ಟೀ ತುಂಬಿ ಕೊಣ್ಣಾಕ ಅನುವುಮಾಡಿಕೊಟ್ಟಿರಿ. ಇನ್ನೂ ಏನ ಮಾಡಬೇಕ್ರಿ ಯವ್ವಾ!

**ಅಂ** — ಹೌದಽ ಚೆನ್ನವ್ವಾ, ನಿನ್ನ ಕೇಳಲಿಕ್ಕೆ ಮರತಿದ್ದೆ. ಸೂಲಗಿತ್ತಿ ಕೆಲಸ ಕಲಿಸೊ ಸಾಲಿಯಿಂದ ಪರವಾನಿಗಿ-ಚೀಟಿ ತಂದಾರ. ಇನ್ನಮ್ಯಾಲ ನೀನು ಬೆಳಗಾವಿಯೊಳಗ ಇರಬೇಕು. ಬಹಳೇನೂ ಅಲ್ಲ. ಒಂದಾರು ತಿಂಗಳ. ಅಲ್ಲಿಂದ ಯಾವದಾರಽ ಆಸ್ಪತ್ರಿಯೊಳಗ ೩೦–೪೦ ರೂಪಾಯಿ ಸಂಬಳ ಸಿಕ್ಕಽ ಸಿಗತದ. ನಿವಿಬ್ಬರೂ ಮದಿವಿ ಮಾಡಿಕೊಂಡು ಸುಖದಿಂದ ಇರಬಹುದು.

**ಚೆ** — ಹೋಗ್ರೀ ನೀವೂ ಒಂದು! (ನಾಚಿ ಒಳಗೆ ಹೋಗುವಳು)

**ಅಂ** — (ರಾಟಿಯನ್ನು ತೆಗೆದುಕೊಂಡು ನೂಲುತ್ತ) ಬಿದ್ದಾಡೆಪ್ಪಗ ಮಾತ್ರ ಬಿಚ್ಚ್ಯಾನಾಥರಾಯರ ಮನೆಯ 'ಸೆರ್ವಂಟ್' ನೌಕರಿ ತಪ್ಪತದ.

**ಬಿದ್ದ** — ಅಯ್ಯೊ, ಆ ನೌಕರೀನ ಆಗಾಳೆ ಬಿಟ್ಟೈತೇಲ್ರಿ.

**ಅಂ** — ಅದು ಹ್ಯಾಂಗ?

**ಬಿದ್ದ** — ನಾನಽ ಏನು ಬಿಡಲಿಲ್ಲರಿ. ಅದಽ ಬಿಟ್ಟಿತರಿ.

**ಅಂ** — ಕಾರಣ?

**ಬಿದ್ದ** — ಅದನ್ನ ಹೇಳಬಾರದರಿ ನಿಮ್ಮಂಥವರ ಮುಂದ.

**ಅಂ** — ಅದರಾಗೆಲ್ಲ ಏನದ? ಏನಿದ್ದರೂ ಹೇಳು. ಅಂಜಬ್ಯಾಡ.

**ಬಿದ್ದ** — ಅಂಜಾಕೇನು ಬಿಡ್ರಿ, ಅದೇನು ದೆವ್ವನ ಮಾತಲ್ಲ, ಭೂತನ ಮಾತಲ್ಲ ಹೇಸಿಕಿ ಮಾತು, ಹ್ಯಾಗ ಹೇಳೋದು ಅಂತ ಅನುಮಾನ. ನೀವಽ ಹೇಳಾಕ ಅಡ್ಡಿ ಇಲ್ಲ ಅಂದೀರಿ ಅಂದಮ್ಯಾಗ ಏನು. ಯವ್ವಾ, ಆಡಾಡ್ತ ಆವ ಈಕಿನ್ನ ಕಳಸು ಅನಬೇಕ್ರೆ? ಮೈಯ್ಯ, ಉರೀತರಿ. "ಇಂತಾ ವೆಲ್ಲಾ ಆಗಾಕಿಲ್ಲ" ಅಂದೆ. "ನಿನ್ನ ನೌಕರಿ 'ಡಿಸ್‌ಮಿಸ್'" ಅಂದ. "ಯೆಸ್, ಆಯಿಲ್ ರಾಯಿಟ್ ಸಽರ್" ಅಂದಬಿಟ್ಟೆ.

**ಅಂ** — ಎಂಥಾ ಜನ ಇದು! ಏನು ನಡತಿ ಇದು!

**ಬಿದ್ದ** — ಇನ್ನೂ ಗೊತ್ತಿಲ್ಲರಿ ನಿಮಗ ಅವನ ಕಥೀ! ಅದು ಭಾಳಭಾಳ ಐತ್ರಿ, ಇನ್ನೂ.

**ಅಂ** — ಮತ್ತೇನು ?

**ಬಿದ್ದ** — ಅಂವ ನೋಡ್ರಿ, ನನ್ನ ತಮ್ಮಾರಿಗೊಮ್ಮೆ ಕರಕೊಂಡು ಹೋಗಿದ್ದನ್ರಿ. ಅದು ಯಾವೂರ ಅಂದ್ರ, ತಿರುಪತಿಯ ಬೆಟ್ಟದ ಹಂತ್ಯಾಕ ತಿರಗಲಿ ಅಂತರಿ. ನನ್ನ ಓದು ಒಂದು ಮನ್ಯಾಗ ಇಳಿಸಿದನ್ರಿ. ಅಲ್ಲೆ ಏನು ಹೇಳ್ರಿ ಆ ಭಂಡಾಟಾನ ! ಛಿ, ಛಿ, ಛಿ! ಒಂದು ದೊಡ್ಡ ಪಟಾಂಗಣದಾಗ ಇವ ಕುಂತಗೊಂಡನ್ರಿ. ಅಲ್ಲಿಂದ ಕೈಮುರದವರು ಕಾಲು ಮುರದವರು, ಕುರುಡರು "ಕುಂಟಕುರುಡರಿಗೆ ನೀವೆ ಶಿವಾ !" ಅಂತ ಬರತಾರಲ್ರಿ ಒದರಿಕೊಂತ ಪಕ್ಕೇರು, ಅವರೆಲ್ಲಾರೂ ಬಂದು, ಬಿಕ್ಕೀಬೇಡಿ ತಂದ ತಮ್ಮ ದುಡ್ಡೆಲ್ಲ –ಅದರಾಗ ಧರ್ಮಕ್ಕೆಷ್ಟೊ, ಕದ್ದದ್ದೆಷ್ಟೊ–ಇವನೆದುರಿಗೆ ಸುರುವಾಕಹತ್ತಿದರು! ಇಂವ ಅದೆಲ್ಲಾ ಎಣಿಸಿದ್ಹಾಂಗ ಮಾಡಿ ಅವರಿಗೀಟು, ಇವರಿಗೀಟು ಹಂಚಿ ಉಳದದ್ದೆಲ್ಲ ತಾ ತಕ್ಕೊಂಡನ್ರಿ. ಇವಗ್ಯಾಕ ಕೊಡತಾರು ಅಂತ ನನಗೂ ಮೊದಲು ತಿಳೀಲಿಲ್ಲರಿ. ಅದು ಬ್ಯಾರೆ ಗತ್ತs ಐತ್ರಿ. ಇವ ಅವರ ಗುರು ಆಗ್ಯಾನ್ರಿ. ಯಾರಿಗೆ ಎಣ್ಣಿ ಕುಂಕಮ ಕೊಟ್ಟು ಕಾಲು ಮುರದ್ಹಾಂಗ ಮಾಡತಾನ್ರಿ. ಕುಡ್ಡರು ಹ್ಯಾಗ ಆಗಬೇಕು ತೋರಿಸಿಕೊಡತಾನ್ರಿ. ಕೂಸುಗಳ ಕೈ ಸೊಟ್ಟಮಾಡೂದು, ಕಾಲು ಮುರಿಯೋದು, ಮೂಗು ಕತ್ತರಸೋದು– ಒಂದ್ರೇ, ಎರಡರೇ–ಅದನ್ನ ನೋಡಾಕs ಅಸಾಧ್ಯ ತಗೀರಿ. ಇಂಥಾ ವಿದ್ಯಾ ಕಲಸತಾನು ಅಂದಮ್ಯಾಗ 'ಫೀ' ಬ್ಯಾಡ್ರೇ ಇದಕ್ಕ ? ಅವರು ಕೊಟ್ಟದ್ದು ಫೀ ನೋಡ್ರಿ. ಇಂವ ಇಂಥಾ ವಿದ್ಯಾ ಕಲಿಸೋ ಕಾಲೇಜಿನ ಪ್ರಿನ್ಸಿಪಾಲ್ ನೋಡ್ರಿ !

**ಅಂ** — ( ಎಚ್ಚತ್ತವಳಂತೆ ) ಅಬ್ಬಾ ! ಏನಿದು ! ಕೇಳಿದರ ಮೈಗೆ ನಡಗು ಬರತದ ! ಮನುಷ್ಯ ಎಷ್ಟು ಹೀನಸ್ಥಿತಿಗೆ ಬಂದ ಇಳಿದಾನಲ್ಲ !

[ ಚೆನ್ನಿ ಗಂಟು ಹಿಡಿದುಕೊಂಡು ಬರುವಳು ]

**ಚೆ** — ಯವ್ವಾ, ಮಲ್ಲಪ್ಪರಾಯರು ಇನ್ನೂ ಬರಲಿಲ್ಲೇನ್ರಿ ?

**ಅಂ** — ಈಗ ಬರಬಹುದು. ( ಬಿದ್ದಾಡಿ ಚೆನ್ನಿ ಜೋಡಾಗಿ ನಿಂತಿರುವದನ್ನು ನೋಡಿ ) ಹೀಂಗs ಜೋಡಾಗಿ ಇರ್ರಿ ಇನ್ನಮ್ಯಾಲ ಆಂ.

**ಚೆ** — ( ನಾಚಿ ಸರಿದು ನಿಲ್ಲುವಳು ) ಹೋಗ್ರೀs !

[ ಸ್ನಾನಮಾಡಿದ ಮಲ್ಲಿನಾಥರಾಯರು ಒದ್ದೆ ಧೋತರ ಹಿಡಿದು ಬರುವರು ]

ಮು — ಎಲಾ ಏನಿದು? ಇವರಿಬ್ಬರೂ ಗಂಟು ಕಟ್ಟಿಗೊಂಡು ಹೊರಡ ಲಿಕ್ಕೇ ಸಿದ್ಧಾಗಿ ನಿಂತಾರಲ್ಲ? ( ಧೋತರ ಉಡುತ್ತ ) ಇಷ್ಟು ಯಾಕ ಅವಸರ?

ಬಿದ್ದ — ನೀವು ಬರೋಮಟ ಇರು ಅಂದಿದ್ರೀ. ನೀವೀಗ ಬಂದ್ರಿ. ನಾವು ಹೂಕ್ಕೇವಿ ಇನ್ನ.

ಮು — ಹೋಗೀರಂತ. ಇವತ್ತs ಯಾಕ? ನಾಳೆ.

ಚೆ — ಗಡಾನ ಅವ್ವನವರ ಮದಿವಿ ಮಾಡ್ರಿ; ಮತ್ತ ಬರ್ತೇವಿ ಹೋಳಗಿ ತುಪ್ಪಾ ಹೊಡ್ಯಾಕ.

ಮು — ( ಉಸಿರ್ಗರೆದು ಕೂಡುತ್ತ ) ಈಗ ಅದಕ್ಕs ಹೋಗಿದ್ದೆ ಚೆನ್ನವ್ವಾ. ವರ ಸಿಗಲಿಲ್ಲಾ. ಸಿಕ್ಕಗಳಿಗ್ಗೆ ಮಾಡತೇನಿ.

ಚೆ — ಮತ್ತ ಇಲ್ಲೇ ಆದಾರು, ಸರೋತ್ತಮರಾಯರಿಗೆ ಕೇಳಬೇಕ್ರಿ?

ಮು — ಕೇಳಿದರ, ಅವರ ಮನೆಯವರು ಒಪ್ಪಬೇಕಲ್ಲ? ನಿನಗ ಹ್ಯಾಂಗ ತಿಳಿಯಬೇಕು ಚೆನ್ನವ್ವಾ.

ಚೆ —ಒಪ್ಪಾಕಿಲ್ಲೇನ್ರಿ? ಕೇಳ್ಯಾರ ನೋಡ್ರೀ. ನಾನೂ ಆ ಬಾಯೀ ರೆದುರಿಗೆ ಮಾತು ತಗದು ಕೇಳ್ತೇನಿ ನಿಂದರ್ರಿ.

ಬಿದ್ದ — ಏಯ್, ಅಂತಾದರಾಗೆಲ್ಲ ನಮ್ಮಂತವರು ಬಾಯಿ ಹಾಕ ಬಾರದು. ಸುಮ್ಮಾಕ ಇರು.

ಮು — ಇರಲಿ. ಇವತ್ತೇನು ನೀವು ಹೋಗುವದು ಬೇಡ. ನಾಳೆ ಹೋಗೀರಂತ. ಬೆಳಗಾವಿಯಿಂದ ತಂದ ಪರವಾನಿಗಿ-ಪತ್ರಾನೂ ಕೊಡತೇನಿ. ಆ ಗಂಟು ಒಯ್ಯಿರಿನ್ನ ಒಳಗ.

[ ಚೆನ್ನಿ, ಬಿದ್ದಾಡಿ ಒಳಗೆ ಹೋಗುವರು ]

ಉಶ್ಯ! ( ಕುರ್ಚಿಯ ಮೇಲೆ ಹಿಂದಕ್ಕೆ ಬಿದ್ದುಕೊಳ್ಳುವನು )

ಅಂ — ಮಾಮಾ! ಏನಾದರೂ ಕೊಡಲೇನು?

ಮು — ಬೇಡ. ( ಮುಖ ತಿರುಗಿಸುವನು )

ಅಂ — ಮಾಮಾ!

ಮು — ( ಮುಖ ತಿರುಗಿಸಿ ) ಏನು ಅಂಜನಾ?

ಅಂ – ಏನೋ ಬಹಳ ಚಿಂತೀಯೊಳಗ ಇದ್ದೀದಿ ಕಾಣಸ್ತದ?

ಅಂ — ಹೌದು. ನಿನ್ನ ಮದಿವೀ ಚಿಂತಿ ನನಗ ಮುತ್ತಿಗಿ ಹಾಕೇದ. ದಾರೀನ ಕಾಣದಂತಾಗಿದೆ.

ಅಂ — ಅದಕ್ಕೇಕಿಷ್ಟು. ಮದಿವೀನs ಬಿಟ್ಟರಾಯಿತು. ನಾ ಇರಲಿಕ್ಕೆ ಸಿದ್ಧ ಇದ್ದೇನಿ.

ಮ — ಇದು ಅದಕ್ಕ ಪರಿಹಾರ ಅಲ್ಲ ಅಂಜನಾ. ತಪ್ಪಿಸಾಟ.

ಅಂ — ಮತ್ತ ದಾರೀನ ಇಲ್ಲದಾಗ ಏನು ಮಾಡೋದು ?

ಮ — ಅದ, ಆದರ.... .... .... ....

ಅಂ — ಯಾವದು ?

ಮ — ( ಸ್ವಲ್ಪ ಕೊಂಕಿನಿಂದ ) ಕ್ರಿಶ್ಚಿಯನ್‌ರಾಗುವದು. ಅಂದರೆ ನಿನ್ನ ದಾಂಪತ್ಯಜೀವನ ಸುಲಭವಾಗುವದು.

ಅಂ — ಚೇಷ್ಟಿ ಮಾಡತೀಯೇನು ಮಾಮಾ ? ಎಂದಿಗೂ ಸಾಧ್ಯವಿಲ್ಲದ ಮಾತು. ಮದಿವೆ ಇಲ್ಲದಿದ್ದರೆ ಇಲ್ಲ. ಏನೋ ನನ್ನ ಕೆಣಕಬೇಕೂ ಅಂತ ಹೀಂಗ ಹೇಳಿರಬೇಕು.

ಮ — ( ನಗುತ್ತ ) ನನಗೂ ಒಪ್ಪಿಗೆಯಿಲ್ಲ. ಆ ಡಾಕ್ಟರ ಏಬ್ರಾಂ ಸೂಚಿಸಿದ ಮಾತೂ ಅಂತ ನಿನಗೆ ಹೇಳಿದೆ. ( ಏಳುತ್ತ ) ಹೌದು. ಈ ಹೊತ್ತು ನಾವಿಬ್ಬರೂ ಕನಕರಾಯರ ಮನೀಗೆ ಟೀಪಾರ್ಟಿಗೆ ಪೋಗಬೇಕಲ್ಲ ಮಧ್ಯಾನ್ಹಕ್ಕ ?

ಅಂ — ಹೌದಲ್ಲ. ( ಉತ್ಸಾಹ ತೋರಿಸಿ ) ಮತ್ತ ಅವರ ತಾಯಿ ಮುದಕರು. ನಾ ಒಂದಿಷ್ಟು ಲಗೂನ ಹೋದರ ಅವರಿಗೆ ಕೆಲಸಕ್ಕ ನೆರವಾಗಬಹುದು. ಹೋಗಲೇನು ?

ಮ — ಓಹೊ. ಹೋಗಲ್ಲ. ಈಗ ಊಟಕ್ಕ ಹೋಗೋಣೇನು ? ಅಡಿಗಿ ಆಗೇದೊ ಇಲ್ಲೋ ಮತ್ತ ?

ಅಂ — ಎಲ್ಲಾ ಆಗೇದ. ಎಲಿ, ಮಣಿ ಹಾಕಿ ಇಟ್ಟೇನಿ.

ಮ — ನಡಿ ಹಂಗಾರ, ಹಸಿವೀನೂ ಆಗೇದ.

[ ಇಬ್ಬರೂ ಒಳಗೆ ಹೋಗುವರು ]

— ತೆರೆ —

## ದೃಶ್ಯ ೪.

[ ಬಿಜ್ಜೂರಿನ ಬೀದಿ ]

**ಬಿ** — ಶೆಟ್ಟರೆ, ಕೊನೆಗೆ ಆಚಾರ್ಯರು ನಮಗ ಕೈಕೊಟ್ಟರಲ್ಲ !

**ಮಾ** — ನಾ ನಿಮಗ ಮೊದಲs ಸೂಕ್ಷನಾ ಹೇಳಿದ್ದಿಲ್ಲs, ಅವನ ವ್ಯಾಪಾರ ಸರಳ ಅಲ್ಲಾ ಅಂತ.

**ಬಿ** — ಅಲ್ಲ ಶೆಟ್ರ್ರ, ನಮ್ಮಿಂದ ಬೇಕಾದಷ್ಟು ತಿಂದು.... ಅಲ್ಲಾ ನೀವೇ ಹೋಗಿ ಕೊಟ್ಟುಬರಲ್ಲಿಲ್ಲೇನು ?.... ಈಗ ಹೀಂಗ ಮಾಡೋದು ಅಂದರೆ.... ನೀವೇ ನೋಡ್ರಿ........

**ಮಾ** — ಅಂವ ಬಿಟ್ಟರೇನಾತು ಬಿಡ್ರೀ. ಮತ್ತೊಂದು ದಾರಿ ತಗೂರು. ಊರಿಗೆ ಬಂದಾರೆ ಸೇರಿಗಿ ಬರಾಕಿಲ್ಲೇನು ?

**ಬಿ** — ಮತ್ತೇನು ಮಾಡಬೇಕಂತೀರಿ ?

**ಮಾ** — ಐತೆಲ್ಲ. ಆದರ ಅದರಾಗ ನಿಮಗ ನಂಬಿಕಿ ಐತ್ಯೋ ಇಲ್ಯೋ.

**ಬಿ** —ಇಲ್ಲದಿದ್ದರೂ ಇಡತೇನಿ ಹೇಳ್ರಿ. ಏನದು ?

**ಮಾ** — ಬರೇ ನಂಬಿಕಿ ಇಟ್ಟರ ಹ್ಯಾಗ ? ಒಂದೀಟು ರೊಕ್ಕಾನೂ ಇಡಬೇಕಾಕ್ಕೈತಿ.

**ಬಿ** — ಎಷ್ಟು ?

**ಮಾ** — ಬಹಳೇನಿಲ್ಲ. ಯಂತ್ರಾ ಬರೆಯಾಕ ಒಂದು ನೂರಾಎಂಟು, ಸಾಮಾನಕ್ಕ ಒಂದು ಮೂವತ್ತು ನಾಲ್ವತ್ತು, ಪಂಚಕಜ್ಜಾಯಕ್ಕ ಒಂದಿಪ್ಪತ್ತೈದು, ಮ್ಯಾಗ ದಕ್ಷಿಣಿ ನಿಮಗ ತಿಳದಷ್ಟು... ....

**ಬಿ** — ಒಟ್ಟು ಎಷ್ಟಾಗಬಹುದು ಅಂತೀರಿ ?

**ಮಾ** — ಎರಡಕ್ಕ ಮಿಕ್ಕಬಹುದು.

**ಬಿ** — ಸ್ವಲ್ಪ ಹೆಚ್ಚಾಗಲಿಲ್ಲs ಶೆಟ್ಟರೆ ?

**ಮಾ** — ಹೆಚ್ಚೇನು, ಕಡಿಮೇನು. ಮದಿವೀ ಖರ್ಚು ಉಳೀತು

ಅನ್ನಬೇಕು, ಇದಕ್ಕ ಮಾಡಬೇಕು. ಹೋಳಿಗಿ ತುಪ್ಪದಾಗರೆ ಬೀಳಬೇಕು, ಕೈ ಬಿಚ್ಚಬಾರದು ಅಂದ್ರ ಹ್ಯಾಗ?

ಬಿ— ಆಗಲಿ ಕೊಡತೇನಿ. ಆದರ ಸದ್ಯಕ್ಕ ನೀವಽ....

ಮಾ — ತಿಳೀತು ಬಿಡ್ರಿ. ನನಗಽ ಕೊಡು ಅಂತೀರಿ ಹೌದಲ್ಲೊ?

ಬಿ — ಹಾಂಗಲ್ಲ, ನೀವು ಕೊಡೋದರೊಳಗಿಂದು....

ಮಾ — ಹೌದು, ಹೌದು. ಒಂದು ಹದಿನೈದು ದಿವಸ ತಡೀರಿ. ಮೊನ್ನೆಮೊನ್ನೆ ಒಂದು ನಾಲ್ವತ್ತು ಸಾವಿರದ ವ್ಯಾಪಾರ ಹೊಂದೇತಿ. ಅವು ಬಂದವೂ ಅಂದರ ತೊಗೊಂಡುಬಿಡ್ರಿ ನಿಮ್ಮ ಎಲ್ಲಾ ಹಣಾನ. ವ್ಯಾಪಾರ ಸರಳ ಇರಬೇಕು.

ಬಿ — ನಾ ಎಲ್ಲಾ ಕೇಳಲಿಲ್ಲ ಶೆಟ್ಟರ.

ಮಾ — ನೀವು ಕೇಳಲಿಲ್ಲ ನನಗ ಗೊತ್ತೈತಿ. ಽಟು ಈಟು ಯಾಕ ಅಂತ ನಾನಽ ಹೇಳಿದೆ. ಮತ್ತ ನಿಮ್ಮ ದೇಶಕ್ಕೇನೋ ಹೋಗಿ ಬರತೇನಿ ಅಂತಿದ್ರೆಲ್ಲಾ. ಹೋಗಿಬರ್ರಿ ಬೇಕಾರ. ಬಂದ ಮ್ಯಾಗ ಮಾಡೋಣ. ಽಽಟರಾಗ ನಾ ಆಚಾರಪ್ಪನೋರನ್ನ ಮಾತಾಡಿಸಿ ನೋಡತೇನಿ ಏನಂತಾರ ಅಂತ. ಕೆಲಸ ಮತ್ತ ಅವನಿಂದಽ ಆಗಿಬಿಟ್ಟಿತೂ ಅಂದ್ರ ಪಾಡಾತು. ಇಲ್ಲೇ ಒಂದೀಟು ಕೆಲಸ ಐತಿ ಹೋಗಿಬರ್ತೇನಿ. ಮತ್ತ ಭೆಟ್ಟಿ ಆಕ್ಕೇನು.

[ ಮಾಚಣ್ಣ ಹೋಗುತ್ತಾನೆ ]

ಬಿ — ಎಲಾ! ಇವನೂ ಕೈಕೊಟ್ಟನಲ್ಲ! ರೊಕ್ಕದ ಮಾತು ಬರುವದರೊಳಗಾಗಿ ನುಸುಳಿಕೊಂಡುಬಿಟ್ಟನಲ್ಲ! ಇನ್ನೇನು ಮಾಡೋದು? ಇನ್ನೊಮ್ಮೆ ಭೆಟ್ಟಿಯಾದಾಗ ಗಟ್ಟಿಯಾಗಿ ಕೇಳಿಬಿಡೋದು, ನಾನು ಕೊಟ್ಟ ಹಣಾ ಎಲ್ಲಾ ಕೊಟ್ಟುಬಿಡು ಅಂತ. ಆ ಹುಡಿಗಿನ್ನ....? ನೋಡೋಣ, ಜೇಕಿ ಉಪಾಯ ಮಾಡೋಣ.

[ ಸಿಗರೇಟು ಹೊತ್ತಿಸಿ ಸೇದಿ ಹೊಗೆ ಬಿಡುತ್ತ ಹೋಗುವನು ]

— ತೆರೆ —

## ದೃಶ್ಯ ೫.

[ ಕನಕರಾಯರ ಮನೆಯ ಪಡಸಾಲೆ ]

**ಥ** — ( ಸವತೀಕಾಯಿ ಹೆಚ್ಚುತ್ತ ) ಸರೂ, ಹೊತ್ತು ಎಷ್ಟಾತು? ಡಾಕ್ಟರು ಬರೋ ಹೊತ್ತಾತೇನು ?

**ಸ** — ( ಕುರ್ಚಿ ಅವಸರದಿಂದ ಎತ್ತಿಡುತ್ತ ) ಅವರೇನು ನಮ್ಮ ಮಂದೀ ಹಾಂಗ ಅಂತ ತಿಳಿದೀಯೇನು ? ಗಡಿಯಾರ ಇದ್ದಾಂಗ ಅವರು !

**ಥ** — ಗಡಿಯಾರದ್ದಾರೆ ಏನು ಹೇಳ್ತೀದಿ ? ನೋಡು, ನಮ್ಮ ಈ ಗಡಿಯಾರು ಬರಾಬರಿ ಅದನs ?

**ಸ** — ನಿಮ್ಮ ಗಡಿಯಾರು ಅದೂs.

**ಥ** — ಸರೂ, ಅದು ನೋಡು, ಆ ಸ್ಟೂಲು ಸ್ವಲ್ಪ ಜಮಖಾನಿಗೆ ಹತ್ತಿದಾಂಗ ಕಾಣಸ್ತದ. ಸ್ವಲ್ಪ ಬಿಡಿಸಿ ಇಡು. ಇಲ್ಲಿದ್ರ ಎಲ್ಲಾ ಏಕಾಕಾರ ಆಗಿಹೋಗತದ.

**ಸ** — ಬಂದೆ, ಬಂದೆ. ಏನು ? ಸ್ಟೂಲs ? ಬಿಟ್ಟೇs ಅದ. ( ಹಾಸಿದ್ದು ಸಮಮಾಡಿ ) ಅವರು ಬರೋ ಹೊತ್ತಾಗಲಿಕ್ಕೆ ಬಂತು. ನೀ ಹೋಗಿ ಚಹಾಕ್ಕ ಎಸರಿಟ್ಟಿರು, ಅಷ್ಟರಾಗs ನಾ ಇಲ್ಲಿ ಎಲ್ಲಾ ಸರಿಮಾಡಿಟ್ಟಿರತೀನಿ. ಬಂದರೂ ಅಂದಗಳಿಗ್ಗೆ ನಿನಗ ತಿಳಿಸತೀನಿ; ಪುಡಿ ಹಾಕೀಯಂತ.

**ಥ** — ಇವರೆಲ್ಲಿದ್ದಾರ ? ಎಲ್ಲ್ಯಾರ ಹೋದರೇನು ಮತ್ತ ?

**ಸ** — ಹೊರಗ ನಿಂತಾನ ಹಾದೀ ನೋಡಿಕೋತ.

[ ಒಳಗೆ ಹೋಗುವಳು ]

[ ಸರ್ವೋತ್ತಮ ಮೆಲ್ಲಗೆ ಹಾಡುವನು ]

### ಹಾಡು

**ರಾಗ: ದೇಸ** **ತಾಳ: ಆದಿತಾಳ**

**ಸ್ನೇಹವೋ ಮೋಹವೋ ? ತಿಳಿಯದು ॥**
**ದೇಹದೊಳೇರಿದ ಕಾವೋ ॥ಪ॥**
**ತರುಣಿ ತಾನಾಡಿದ ಕರುಣ–ನುಡಿ ಕದಡಿದಾ**
**ಮರುಳುಗೊಳಿಸುವೀ ಭಾವವು ॥೧॥**

ನಗೆಯ ತಿಳಿಮಾತಿನ ಬಗೆಗೆ ಬಲು ಸೋತೆ ನಾ॥
ಸೊಗಹಿತಗೂಡಿದ ನೋವೊ ॥ ೨ ॥

[ ಹಾಡು ಮುಗಿಯುವ ಹೊತ್ತಿಗೆ ಅಂಜನಾ ಬರುವಳು ]

ಸ — ಓ! ಬರಬೇಕು. ದಯಮಾಡಿಸಬೇಕು.

ಅಂ — ಇದೇನು ಬಹಳ ಆದರೋಪಚಾರ ನಡೆಯಿತಲ್ಲ! ಹಃಹಃಹಃ

## [ ತೆರೆಯಲ್ಲಿ ]

ಢ — ಸರೂ! ಬಂದರೇನು?

ಸ— ( ಅಂಜನೆಗೆ ಸುಮ್ಮನಿರಲು ಸನ್ನೆ ಮಾಡಿ )ಇನ್ನೂ ಯಾರೂ ಬಂದಿಲ್ಲ ಅವ್ವಾ!

ಅಂ — ( ಜೋರಾಗಿ ನಗುವಳು )

ಸ — ( ಬೆಕ್ಕಿನಂತೆ ಒದರಿ ) ಉಶ್ ಉಶ್ ಉಶ್ ....

ಢ — ಯಾರೋ ನಗತಾರಲ್ಲೋ!

ಸ — ಬೆಕ್ಕೇಳವಾ.

ಢ — ( ಹೊರಗೆ ಬಂದು ) ಏ ಖೋಡಿ ಬೆಕ್ಕೂ ಅಂದೆಲ್ಲೋ! ಬರ್ರಿ, ಬರ್ರಿ ಅಂಜನಾಬಾಯರs. ನೀವೇನು ತಿಳಿಕೋಬ್ಯಾಡ್ರಿ. ಅವರೆಲ್ಲಿದ್ದಾರ?

ಅಂ — ಅವರು ಬರಬೇಕಾದರ ಇನ್ನೂ ತಡ.

ಢ — ಹಂಗಾರ ನೀವು ಲಗೂ ಬಂದಿರೇನು?

[ ಸರ್ವೋತ್ತಮ ಒಳಗೆ ನುಸುಳುವನು ]

ಅಂ — ಹೌದು. ಚಹಾಪಾರ್ಟಿ ಕೆಲಸ. ನಿವೂ ಒಂಬ್ಬೊಂಟಿಗರು. ಏನೋ ಲಗೂ ಬಂದರ ನಿಮಗೂ ಅಷ್ಟು ನೆರವಾದ್ಹಾಂಗಾದೀತು ಅಂತ ಮುಂಚೇ ಬಂದೆ. ಇನ್ನೊಂದಂದರ, ನಿಮ್ಮ ಮನೀನೂ ನೋಡಿದ್ದಿಲ್ಲ.

ಢ — ಅಯ್ಯ ಪಾಪs! ದೇಶಪಾಂಡೆ ಪೋಲೀಸ ಢವಳಾಬಾಯಿ ಮನಿ ಯಾವದು ಅಂತ ಕೇಳಿಬಿಟ್ಟಿದ್ದರ ಯಾರು ಬೇಕಾದವರು ಹೇಳತಿದ್ದರು.

ಅಂ — ( ಸೆರಗು ಬಾಯಲ್ಲಿ ಕಚ್ಚಿ ಮುಖ ತೊರಳಿಸುವಳು ) ಅತ್ಯಾ, ನಾಯೇನು ಕೆಲಸಾ ಮಾಡ್ಲಿ ಹೇಳ್ರಿ?

ಢ — ಏನು ಮಾಡೋದೂ ಬ್ಯಾಡ ನಮ್ಮವ್ವಾ. ಸುಮ್ಮನ ಕೂಡು.

ನಾ ಎಲ್ಲಾ ಮಾಡೇ ಇಟ್ಟೇನಿ. ಚಹಾಕ್ಕ ನೀರೊಂದು ಇಟ್ಟರ ಆಯ್ತು.

ಅಂ — ನಾ ಇಟ್ಟು ಬರತೇನಿ ಅತ್ಯಾ? ( ಹೊರಡುವಳು )

ಥ – ಬ್ಯಾಡವ್ವಾ. ನಾ ಎಲ್ಲಾ ಇಡತೇನಿ.

ಅಂ — ಹಂಗಾರ ನೀವು ನೀರು ಇಟ್ಟು ಬರ್ರಿ; ನಾ ಸವತೀಕಾಯಿ ಹೆಚ್ಚಿಕೊಡತೇನಿ. ನೀವು ಯಾವದು ಮಾಡತೀರಿ ಹೇಳ್ರಿ?

ಥ — ಅದೊಂದೂ ಬ್ಯಾಡವ್ವಾ. ನಮ್ಮ ನೀರು–ನಿಡಿ ಮುಟ್ಟೋ ಹಾಂಗ ಇರೂದಿಲ್ಲ.

ಅಂ — ಅಂದರ?

ಥ — ನೀವು ಮುಟ್ಟಲಿಕ್ಕೆ ಬರೂದಿಲ್ಲ.

ಅಂ — ಯಾಕ ಅತ್ಯಾ?

ಥ — ಅದೇನೋ ನಮ್ಮವ್ವಾ, ಅವೆಲ್ಲಾ ನನಗ ಗೊತ್ತಿಲ್ಲ.

ಅಂ — ಹಂಗಾರ ನಾ ಹೆಚ್ಚಿಕೊಡತೇನಿ; ನೀವು ನೀರು ಇಟ್ಟು ಬರ್ರಿ.

ಥ — ಹಾಂಗs ಮಾಡು.

[ ಒಳಗೆ ಹೋಗುವಳು ]

ಸ —(ಸುಳ್ಳು ವೇಷ ತೆಗೆದು ಬಂದು ಅಂಜನೆಯನ್ನು ನೋಡಿ ಹೋಗುವನು)

ಥ — ( ಬಂದು ) ನಾ ಹೆಚ್ಚತೇನಿನ್ನ ತರ್ರಿ.

ಅಂ — ನೀವು ಕೂಡ್ರಿ ಸ್ವಲ್ಪ ಹೊತ್ತು. ನಾನs ಹೆಚ್ಚಿ ಮುಗಸತೇನಿ. ಅತ್ಯಾ,ಒಂದು ಮಾತು ನಿಮ್ಮನ್ನ ಕೇಳಬೇಕು ಅಂತ ಬಂದsದ. ಕೇಳಲೇನು?

ಥ — ಆಗsತ್ಯ ಕೇಳು. ತಿಳಿದಷ್ಟು ಹೇಳತೇನಿ.

ಅಂ — ಆಗಳೆ ನಾ ನೀರು ಮುಟ್ಟಲಿಕ್ಕೆ ಬರೋಹಾಂಗಿಲ್ಲ ಅಂದಿರಿ. ಯಾಕ?

ಥ — ಏನೋ ನಮ್ಮವ್ವಾ! ನಾವು ಹಳೇ ಪದ್ಧತಿ ಮಂದಿ. ಮಡಿ ಮೈಲಿಗಿ ಹುಚ್ಚು ಬಹಳ ನಮ್ಮಲ್ಲೆ. ನೀವೇನೋ ಆ ಪಂಢರಪುರದ ಆಶ್ರಮದಾಗ ಹುಟ್ಟಿದವರಂತಲ್ಲ. ಹೌದs?

ಅಂ — ಹೌದು.

ಥ — ಮತ್ತ ಅಲ್ಲಿ ಹುಟ್ಟಿದ ಹುಡುಗರು ಗಂಡ ಸತ್ತಮ್ಯಾಲ ಹುಟ್ಟಿ

ದವಂತಲ್ಲ, ಹೌದೇನು? ನಿಮಗs ಅಂತ ತಿಳಕೊಂಡು ನೀವು ಮನಸ್ಸಿಗೆ ಹಚ್ಚಿಗೋಬ್ಯಾಡ್ರಿ ಅಂ!

**ಅಂ** — ಇಲ್ಲ ಅತ್ಯಾ. ಎಲ್ಲಾರಹಂಗs ನೀವೂ ತಿಳಕೊಂಡೀರಿ; ನಿಮ್ಮದೇನು ತಪ್ಪು? ಆದರ ಆಶ್ರಮದಾಗ ಹುಟ್ಟಿದಾಕ್ಷಣಕ್ಕ ಮುಟ್ಟಲಿಕ್ಕೆ ಯಾಕ ಬರಬಾರದು?

**ಧ** — ಅದೇನೋ ನಮ್ಮವ್ವಾ. ನಾವೇನಷ್ಟೊಂದು ಕಲಿತವರs? ನಮ್ಮ ಆಚಾರ್ರು ಹ್ಯಾಂಗ ಹೇಳತಾರೊ ಹಾಂಗ ಕೇಳತೀವಿ. ಪಾಪ ಪುಣ್ಯಾ ಎಲ್ಲಾ ಅವರ ಸುತ್ತ. ನಿಮ್ಮ ತಾಯಿ.... ?

**ಅಂ** — ( ಸುಮ್ಮನಿರುವಳು )

**ಧ** — ಮಲ್ಲಿನಾಥರಾಯರು ನಿಮಗೇನಾಗಬೇಕು?

**ಅಂ** — ನನ್ನ ತಾಯಿ ಅವರ ಅಕ್ಕನ ಮಗಳು ಅಂತ. ನನ್ನ ಹಡದ ಗಳಿಗ್ಗೆ ನಮ್ಮ ತಾಯಿ ತೀರಿಕೊಂಡಳಂತ. ಆಶ್ರಮದವರs ನನ್ನ ಜೋಪಾನ ಮಾಡಿದರು; ವಿದ್ಯಾ ಕಲಿಸಿದರು. ಹಿಂದಾಗಡೆ ಇವರು ಬಂದು ಕರಕೊಂಡು ಬಂದರು.

**ಧ** — ಅಯ್ಯೋ ಪಾಪs! ಹಾಂಗಾರ ನಿಮಗ ಇಂಗ್ರೇಜಿ ಬರತದೇನು?

**ಅಂ** — ಹುಂ. ಮ್ಯಾಟ್ರಿಕ್ ಪಾಸಾಗೇನಿ.

**ಧ** — ಹಂs! ಬಹಳ ಓದಿಕೊಂಡೀದೆವ್ವಾ ಹಂಗಾರ! ಬ್ರಾಹ್ಮಣರಾಗಾರೆ ಹುಟ್ಟದ್ದ್ಯಾ?

**ಅಂ** — ಅಂದರೇನಾಗತಿತ್ತು ಅತ್ಯಾ?

**ಧ** — ನಮ್ಮ ಸರೂಗ ತಗೊಂಡುಬಿಡತಿದ್ದೆ.

**ಅಂ** — (ಅರ್ಥಪೂರ್ಣವಾಗಿ ದೈನ್ಯದಿಂದ ನೋಡುವಳು ಧವಳಾಬಾಯಿಯ ಮುಖವನ್ನು)

**ಧ** — ಅಲ್ಲ ಮತ್ತ ನೀ ಏನಾರ ತಿಳಿಕೋಬ್ಯಾಡವಾ. ನೀನs ಕೇಳಿದಿ ಅಂತ ಇಷ್ಟು ಮಾತಾಡಿದೆ.

**ಅಂ** — ಅತ್ಯಾ, ಯಾರದೋ ತಪ್ಪಿಗೆ ಯಾರಿಗೋ ಶಿಕ್ಷಾ ಅಂದರ ಹ್ಯಾಂಗ? ನಮ್ಮನ್ನ ಕೇಳವರು ಯಾರು ಹಂಗಾರ? ( ದುಃಖ ತುಂಬಿ ತಲೆ ತಗ್ಗಿಸುವಳು )

ಢ — (ದುಃಖಸೂಚಿಸಿ) ಏನೋ ಎಂತೊ! ನಿನ್ನ ಈ ದೈನಾಸ ತುಂಬಿದ ಮಾರಿ ನೋಡಿದರ ನನಗ ಥಟ್ಟನ ನನ್ನ ಮಗಳ ಮಾರೀನ ನೆನಪಾತು. ನಿನ್ನ ಧನಿ, ನಿನ್ನ ಮಾತಿನ ರೀತಿ, ನಿನ್ನ ನಡಿಗಿ ಎಲ್ಲಾ ಆಕೀನ್ನs ಹೋಲತಾವ. ಏನು ಮಾಡೋದು.... ( ಬಿಕ್ಕುವಳು )

ಅಂ — ಅತ್ಯಾ ನಿಮ್ಮ ಮಗಳು ಈಗೆಲ್ಲಿದ್ದಾಳ ?

ಢ — ಯಾರಿಗೆ ಗೊತ್ತು ನಮ್ಮವ್ವಾ! ಅದೊಂದು ಕಥೀನ ಆಗಿ ಹೋತು. ಹದಿನೈದು ವರ್ಷ ಆದುವು ಆಕಿ ನಮ್ಮ ಮನಿ ಬಿಟ್ಟು ಹೋಗಿ. ಇದ್ದಾಳೊ ಸತ್ತಾಳೊ ಗೊತ್ತಿಲ್ಲ. ( ಬಿಕ್ಕುತ್ತ ) ತುಂಬಿದ ಬಸಿರಿ ಮನೆ ಬಿಟ್ಟು ಹೋದ್ಲು! ಆಕಿ ಗಂಡಂದೂ ಪತ್ತೆ ಇಲ್ಲ. ( ಎದ್ದುಹೋಗಿ ಫೋಟೋ ತಂದು ತೋರಿಸಿ ) ಇಕೀನs ನನ್ನ ಮಗಳು. ಇವರs ಅಳಿಯಂದಿರು. ದೂರೇನು ಅಲ್ಲ - ನನ್ನ ತಮ್ಮನs. ಸರೂನ ಮುಂಜ್ವಿಯೊಳಗ ತಗದದ್ದು.

ಅಂ — ( ನೋಡುತ್ತ ) ಛಲೋ ಇದ್ದಾರ. ಯಾವೂರಿಗೆ ಕೊಟ್ಟಿತ್ತು ಇವರನ್ನು ?

ಢ — ಏಳೂರ ನಾಡಗೌಡರ ಮನಿಗೆ ಕೊಟ್ಟಿತ್ತು.

ಅಂ — ಇವರ ಹೆಸರೇನು ?

ಢ — ಶ್ರೀವಲ್ಲಭರಾಯರು.

ಅಂ — ಅತ್ಯಾ, ಮನೀ ಬಿಟ್ಟು ಹೋಗಲಿಕ್ಕೇನು ಕಾರಣಾಯಿತು ?

ಢ — ಹೊತ್ತs ಬಂತು ಹಾಂಗ. ಅವರದೇನು ತಪ್ಪಿಲ್ಲ. ಕಾಂಗ್ರೆಸ್ ಚಳವಳಿ ಕಾಲ. ನೆನಿಸಿದರ ಮೈಗೆ ಮುಳ್ಳು ಬರತಾವ. ಆ ಬೀಸಿದ ಗಾಳಿ ಎಲ್ಲಾರನ್ನೂ ಎಳಕೊಂಡಿತು. ಶ್ರೀವಲ್ಲಭರಾಯರೂ ಅದನ್ನ ಸೇರಿ, ಎಲ್ಲೆಲ್ಲೊ ಹೋಗಿ ಭಾಷಣ ಮಾಡಿದರು. ವಕೀಲಿ ಬಿಟ್ಟರು. ಸರಕಾರದವರು ಹಿಡ ಕೊಂಡು ಹೋಗಿ ಜೇಲಿಗೆ ಹಾಕಿದರು. ಶಿಕ್ಷಾ ಮಾಡಿದರು. ಮುಂದ ಜೇಲಿ ನಿಂದ ಬಿಟ್ಟವ್ಯಾಲ ಎಲ್ಲಿ ಹೋದರೋ ಏನೋ ತಿಳೀದು. ಅವರು ಜೇಲಿಗೆ ಹೋದಾಗ ಮಗಳನ್ನು ಮನ್ಯಾಗ ತಂದು ಇಟಗೊಂಡಿದ್ದಿವಿ. ಅದಕ್ಕೂ ಸರ ಕಾರದವರ ಕಣ್ಣು ನಮ್ಮಮ್ಯಾಲೂ ಬಿದ್ದೀತು ಅಂತ ಅವರ ಮ್ಯಾಲಿನ ಸಾಹೇಬ ಹೇಳಿದನಂತ. ತಮ್ಮ ನೌಕರಿ ಎಲ್ಲಿ ಹೋಗತದೋ ಅಂತ ಮನೀಗೆ ಬಂದು

ಮಗಳ ಮ್ಯಾಲ ಹರಿಹಾಯಲಿಕ್ಕೆ ಹತ್ತಿದರು. ತಿಳವಳಿಕಿ ಹುಡಿಗಿ. ದಿನ ತುಂಬಿದ್ದರೂ ಒಂದು ದಿನ ಮನೀಬಿಟ್ಟು ಹೋಗಿಬಿಟ್ಟಳು! ( ದುಃಖಿಸುವಳು ) ಇದ್ದರ ಇಷ್ಟೊತ್ತಿಗೆ ನಿನ್ನಷ್ಟು ಮೊಮ್ಮಗಳು ಇರತಿದ್ದಳು ನನಗ.(ಕಣ್ಣೊರಸಿಕೊಳ್ಳುವಳು)

**ಅಂ** — ಅತ್ಯಾ, ಈಗ ಅತ್ತರೇನು ಬಂತು? ಆದದ್ದಾಗಿ ಹೋಯಿತು.

[ ಸರ್ವೋತ್ತಮ ಸ್ಯೂಟನಲ್ಲಿ ಬರುತ್ತಾನೆ ]

[ ಗಡಿಬಿಡಿಯಿಂದ ಅಂಜನಾ, ಧವಳಾಬಾಯಿ ಎದ್ದು ಒಳಗೆ ಹೋಗುವರು ]

**ಸ** — (ನಗುತ್ತ ಅವರು ಬಿಟ್ಟುಹೋದ ಫೋಟೋ ತೆಗೆದುಕೊಂಡು) ನನ್ನ ಗುರುತು ಸಿಕ್ಕಾಂಗ ಕಾಣಲಿಲ್ಲ ಇವರಿಗೆ.(ಫೋಟೋ ದಿಟ್ಟಿಸಿ ನೋಡಿ, ಅಂಜನೆಯ ಕಡೆಗೆ ನೋಡಿ, ವಸ್ತ್ರತೆಗೆದು ಅದನ್ನು ಒರಿಸಿ ) ಇದಕ್ಕೂ ಆ ಮುಖಕ್ಕೂ ಹೋಲಿಕಿ ಕಾಣಸ್ತದ.

**ಧ** — ( ಕಾಣಿಸಿಕೊಳ್ಳುತ್ತ )ಅಯ್ಯ ಖೋಡೀ, ನೀನs! ನಾ ಯಾರೋ ಅಂತ ತಿಳಿದಿದ್ದೆ ! ನಮ್ಮ ಸರೂ, ಈ ಅಂಗಿ ಟೊಪ್ಪಿಗಿ ಹಕ್ಕೊಂಡಾ ಅಂದರ ಎಷ್ಟು ಛಂದ ಕಾಣಸ್ತಾನಂದ್ರೀ, ಆಗದಿ ಸಾಹೇಬರ ಹಾಂಗ ಕಾಣಸ್ತಾನ!

[ ಅಂಜನಾ, ಸರ್ವೋತ್ತಮ ಒಬ್ಬರನ್ನೊಬ್ಬರು ನೋಡಿ ನಗುವರು ]

**ಧ** — ಯಾಕ, ನಗತೀರಿ ಯಾಕ?

**ಅಂ** — ಅಲ್ಲಾ, ಸಾಹೇಬರನ್ನ ಮುಟ್ಟಿಸಿಗೋಬಾರದೂ ಅಂತೀರಿ; ಆದರ ಮಗನ್ನ ಸಾಹೇಬರನ ಮಾಡತೀರಿ.

**ಧ** — ಅಯ್ಯ, ಹೌದು, ಹೊಳೀಲೇ ಇಲ್ಲ ನೋಡವಾ. ನಿನ್ನ ಬುದ್ಧಿ ಆರೆ ಎಷ್ಟು ಚುರುಕು ಅದ ಅಂತೀ! ಸರಳ ಬರೋ ಹಾಂಗಿದ್ದರ ನೋಡು, ನಿನ್ನ ನಮ್ಮ ಸರೂಗ....

**ಸ** — ಅವ್ವಾ! ಡಾಕ್ಟರೂ, ಮಲ್ಲಿನಾಥರಾಯರೂ ಬಂದರು. ಚಹಾದ ತಯಾರಿ ಮಾಡು.

[ ಹೋಗುತ್ತಾನೆ ]

**ಅಂ** — ( ಅಲ್ಲಿಯ ಜಾಗ ಸ್ವಚ್ಛ ಮಾಡುತ್ತ, ಸಾಮಾನುಗಳನ್ನು ಸರಿಯಾಗಿ ಇಡುತ್ತ ಸರ್ವೋತ್ತಮನು ಅಂದ ಹಾಡನ್ನೆ ಗುಣುಗುಣಿಸುತ್ತಿರುವಾಗ )

**[ ತೆರೆಯಲ್ಲಿ ]**

**ಥ** — ಅಯ್ಯೋ! ಸತ್ತೆನೇ ಸತ್ತೆ!

**ಅಂ** — ಏನಾಯಿತು ಅತ್ತ್ಯಾ? ( ಓಡಿ ಒಳಗೆ ಹೋಗುವಳು )

ಡಾಕ್ಟರ್ ಮಲ್ಲಿನಾಥ, ಕನಕರಾಯ, ಸರ್ವೋತ್ತಮ ಬರುವರು ]

**ಕ** — ( ಎಲ್ಲರಿಗೂ ಆಸನಗಳನ್ನು ತೋರಿಸಿ ) ಡಾಕ್ಟರ್ ಸಾಹೇಬರು ಆ ಕುರ್ಚಿಯ ಮೇಲೆ ಕುಳಿತುಕೊಳ್ಳಬೇಕು.

[ ಡಾಕ್ಟರು ಹ್ಯಾಟು ತೆಗೆದು ಕುಳಿತುಕೊಳ್ಳುವರು ]

ಬರ್‍ರಿ, ಮಲ್ಲಿನಾಥರಾವ್. ಇಲ್ಲಿ ಕುಳಿತುಕೊಳ್ಳೋಣ ನಾವು.

[ ಹಾಸಿದ ಜಮುಖಾನೆಯ ಮೇಲೆ ಕುಳಿತುಕೊಳ್ಳುವರು]

[ ಸರ್ವೋತ್ತಮ ಒಳಗೆ ಹೋಗುವನು ]

**ಕ** — ( ಡಾಕ್ಟರಿಗೆ ) ಹಃ ಹಃ ಹಃ ತಮ್ಮಂಥವರು ನಮ್ಮಂಥ ಬಡವರ ಮನಿಗೆ ಬಂದ್ರಿ. ಬಹಳ ಸಂತೋಷ ಆಯ್ತು. ( ಮಲ್ಲಿನಾಥರಾಯರಿಗೆ ) ತಾವು ನಮ್ಮಲ್ಲಿಗೆ ಬರುವದೇ ಅಪರೂಪ. ( ಇಬ್ಬರಿಗೂ ) ಏನೋ ಬಡವರ ಸತ್ಕಾರ! ಆಳಲೀ ಬರ್‍ಲಿ. ದೊಡ್ಡ ಮನಸ್ಸು ಮಾಡಿ ಸ್ವೀಕರಿಸಬೇಕು. ನ್ಯೂನತೆಗಳನ್ನೆಣಿಸಬಾರದು.

**ಏ** — ನಮ್ಮ ಧರ್ಮದಲ್ಲಿ ಬಡವರು ಶ್ರೀಮಂತರು ಎಂಬ ಭೇದವನ್ನೇ ಎಣಿಸುವದಿಲ್ಲ. ಹಾಗೆ ಎಣಿಸಿದರೆ ನಮ್ಮ ಪರಲೋಕದ ತಂದೆಯು ತೃಪ್ತಿ ಹೊಂದಲಾರನು.

**ಕ** — ಹಃ ಹಃ ಹಃ ಸಂತೋಷ. ( ಒಳಗೆ ನೋಡಿ ) ಸರ್ವೋತ್ತಮಾ! ಸರ್ವೋತ್ತಮಾ! ಲಗೂನ ತಗೊಂಡು ಬಾ.

**ಮ** — ಬರಲಿ, ಬರಲಿ. ಯಾಕೆ ಅವಸರ? ಸಾವಕಾಶ ಬರಲಿ.

**ಸ** — (ಅವಸರದಿಂದ ಬಂದು) ಅಪ್ಪನ ಕಾಲ ಮೇಲೆ ಎಸರು ಬಿದ್ದಿದೆ!

**ಏ** — ಕಾಲಮೇಲೆ ಎಸರು ಬಿದ್ದಿದೆ! My God! ( ಏಳುತ್ತ ) ಅದು ಹೇಗಾಯ್ತು?

**ಸ** — ಒಲೆಯ ಮೇಲಿನ ತಪ್ಪೇಲಿ ಇಳಿಸುವಾಗ ಜಾರಿ ಬಿತ್ತಂತೆ ಕಾಲ ಮೇಲೆ. ಈಗ ತರತೇನಿ. [ ಒಳಗೆ ಹೋಗುವನು ]

**ಏ** — ಓ! ಏನಾದರೂ ಉಪಾಯ ಮಾಡಲೇಬೇಕು. ಯಾವು

ದೊಂದು ಪ್ರಾಣಿಯು ಉಪದ್ರವದಲ್ಲಿ ಬಿದ್ದರೆ ಅವನನ್ನು ಪರಾಂಬರಿಸ ಬೇಕೆಂದು ಘನ ಮಹಿಮೆಯುಳ್ಳ ಬೆಳಕುಗಳ ತಂದೆಯ ಮಗನಾದ ಯೇಸುವು ತನ್ನ ಸುವಾರ್ತೆಯಲ್ಲಿ ಹೇಳಿದ್ದಾನೆ. ಒಳಗೆ ಹೋಗುವಾ.

[ ಕನಕರಾಯರ ಹೊರತಾಗಿ ಎಲ್ಲರೂ ಹೋಗುವರು ]

ಕ — ( ಹಣೆ ಬಡೆದುಕೊಳ್ಳುತ್ತ ) ಛೀ, ಛಿ! ಅಡಿಗೀ ಮನಿಯೊಳಗ ಬೂಟುಗಾಲಿನಿಂದ ಹೋಗಿಬಿಟ್ಟ ಮಹಾರಾಯಾ! ಪ್ರಾರಬ್ಧ ಕರ್ಮಾ! .... ( ಏಳುವನು )

[ ಏಬ್ರಾಂ, ಮಲ್ಲಿನಾಥ ಬರುವರು ]

ಏ — ಅಂಜನಾಬಾಯಿ ಎಲ್ಲ ಉಪಾಯವನ್ನು ಮಾಡಿಬಿಟ್ಟಿದ್ದಾರೆ. ಆ ಬಗ್ಗೆ ದಯಾಳುವಾದ ಯೇಸುಕ್ರಿಸ್ತನನ್ನು ನೆನೆಯಲಿಕ್ಕೆ ಹೇಳಿರಿ.

[ ಸರ್ವೋತ್ತಮ ಫಲಾಹಾರದ ತಟ್ಟೆ ತಂದಿಡುವನು ]

ಓ! ನನಗೆ ಮೇಲೆ,ಮಲ್ಲಿನಾಥರಾಯರಿಗೆ ಕೆಳಗೆ, ಈ ಭೇದಗಳು ಬೇಡ. ಭೇದ ಗಳನ್ನು ಮಾಡಿದರೆ ನಮ್ಮ ಬೆಳಕುಗಳ ತಂದೆಯು ಕೋಪವನ್ನು ಹೊಂದು ವನು. ಆದುದರಿಂದ ನಾನೂ ಕೆಳಗೆಯೇ ಕುಳಿತುಕೊಳ್ಳುತ್ತೇನೆ.

[ ಕೆಳಗೆ ಬಂದು ಕೂಡುವನು ]

[ ಸರ್ವೋತ್ತಮ ತಟ್ಟೆ ತಂದಿಡುವನು ]

ಸ — ಪ್ರಾರಂಭಿಸಬೇಕು.

ಏ — ನೀವೂ ಕೈ ಹಾಕಬೇಕು ಕನಕರಾಯರೇ.

ಕ — ( ಸಮೀಪ ಸರಿದು ) ತಗೋತೀನಿ, ತಗೋತೀನಿ. ನಿಮ್ಮದು ಸಾಗಲಿ.

ಏ — ( ಒಂದು ಹಣ್ಣಿನ ಹೋಳು ಕನಕರಾಯರ ಕೈಯಲ್ಲಿ ಹಾಕುವನು )

ಕ — ( ಮುಖ ಕಿವುಚಿ ಅದನ್ನು ತಿನ್ನುವನು )

[ ಸರ್ವೋತ್ತಮ ಅಂಜನಾ ಇಬ್ಬರೂ ಚಹಾ ತಂದಿಡುವರು ]

ಏ — ಕನಕರಾಯರೆ, ತಮಗೆ ಚಹಾ ?

ಕ — ಇಲ್ಲ, ನಾನು ಚಹನನ್ನೇ ಕುಡಿಯುವದಿಲ್ಲ.

ಏ — ( ಚಹಾ ಕುಡಿಯುತ್ತ ) ಮುಂಬೈಯಿಂದ ಕಾಗದ ಬಂದಿದೆ.

ಒಳ್ಳೇ ಸಂಬಳದ ನೌಕರಿ, ನಿಮ್ಮ ಮಗನಿಗೆ........

**ಕ** — ಎಷ್ಟು ಅಂತ ತಿಳಿಸಿಲ್ಲೇನು ?

**ವಿ** — ಎರಡು ನೂರು ಎಂದು ತಿಳಿಸಿದ್ದಾರೆ. ಆದರೆ ಒಂದು ಕಟ್ಟಳೆ ಮಾತ್ರ ಹಾಕುತ್ತಾರಂತೆ. ಆದಕ್ಕೆ ತಾವು ಒಪ್ಪುವಿರಾದರೆ ನೌಕರಿ ಸಿಗುವದು ನಿಶ್ಚಿತ.

**ಕ** — ಹೂಂ, ಅಗತ್ಯ ಆಗಬಹುದು.

**ಮ** — ಮೊದಲು ಅವರ ಕಟ್ಟಳೆ ಏನು ಕೇಳಿಕೊಳ್ಳಿರಿ. ಆನಂತರ ವಿಚಾರಿಸಿ ನಿಮ್ಮ ಅಭಿಪ್ರಾಯ ತಿಳಿಸಿರಿ.

[ ಚಿನ್ನಮುದ್ದಣ್ಣಾಚಾರ್ಯರು ಬಂದು ನೋಡಿ "ಥುತ್, ಭ್ರಷ್ಟಾಕಾರ! ಭ್ರಷ್ಟಾಕಾರ!" ಎಂದುಕೊಂಡು ತಿರುಗಿ ಹೋಗುವರು ]

**ವಿ** — ಹೌದು, ಮಲ್ಲಿನಾಥರಾಯರು ಹೇಳುವದು ಸರಿಯಾಗಿದೆ. ಆ ಕಟ್ಟಳೆ ಏನೆಂದು ಈಗ ಬರೆದಿಲ್ಲ. ಮುಂದೆ ಅದು ನಿಮಗೆ ತಿಳಿಸಲ್ಪಡುವದು. ಆಚಾರ್ಯರು ಬಂದು ಹಾಗೇ ತಿರುಗಿ ಹೋಗಿಬಿಟ್ಟರಲ್ಲ! ಅವರನ್ನೂ ಚಹಕ್ಕೆ ಕರೆಯಬಾರದೋ ?

**ಶಾಂ** — (ತೆರೆಯಿಂದ ಹಣಿಕಿ ಹಾಕಿ) ಹೌದು, ನನ ಮಗ ಭರಮನ ದನಿ ಹಾಗs ಐತಿ! ಹೋಲಿಕೀನೂ ಹಾಗs ಕಾಣತೈತಿ! ಕಿವಿಮ್ಯಾಗ ನರೋಲಿ ಐತೇನೋ ನೋಡ್ಲ್ಯಾ? ( ಇನ್ನಿಷ್ಟು ಇಣಕಿ ) ಹೌದು! ಅದೂ ಐತಿ! ಇಲ್ಲೆ ಹೊರಗ ನಿಂತು ಹೆಸರಗೊಂಡು ಒಂದೀಟು ಒದರಿ ನೋಡತೀನಿ. ಭರಮಾ!

[ ಧ್ವನಿ ಬಂದತ್ತ ಕಕ್ಕಾವಿಕ್ಕಿಯಾಗಿ ವಿಬ್ರಾಂ ನೋಡುವನು ]

**ಕ** — ಏನು ಡಾಕ್ಟರೆ, ಯಾರ್‍ರs ಒದರಿದರೇನು ನಿಮ್ಮನ್ನ ?

**ವಿ** — ಇಲ್ಲ, ಇಲ್ಲ ( ನಗುವನು )

**[ ತೆರೆಯಲ್ಲಿ ]**

**ಶಾಂ** — ಭರಮಾ !

[ ವಿಬ್ರಾಂ ಮತ್ತೆ ಅತ್ತ ನೋಡವನು ]

**ಮ** — ತಮ್ಮ ಪರಿಚಿತ ಧ್ವನಿಯೇನು ?

**ವಿ** — ಏನೋ ಹಾಗೆ ಭಾಸವಾಯಿತು. (ಎದ್ದು) ಯಾರು ನೋಡಿ ಬರುತ್ತೇನೆ.

ಮ — ಯಾರೋ ಭಿಕ್ಷುಕರು ಒದರಿರಬೇಕು.

ಸ — ( ತಾಂಬೂಲ ಕಟ್ಟಿ ತಂದು ) ಡಾಕ್ಟರು ಇಲ್ಲಲ್ಲ ?

ಕ — ಹೊರಗ ಹೋಗ್ಯಾರ. ಈಗ ಬರತಾರ. ಇಡು.

[ ಇಟ್ಟು ಹೋಗುವನು ]

ಎಷ್ಟು ಹೊತ್ತು ಹೋದರಿವರು ?

ಮ — ಸಿಕ್ಕಿರಬೇಕು ಹೊಸ ಗಿರಾಕಿ. ಏನs ಇರಲಿ, ರಾಯರ, ಈ ಜನರ ತಾಳ್ಮಿ ಮಾತ್ರ ಹೊಗಳತಕ್ಕಂಥಾದ್ದು.

ಕ — ಉಪಕಾರ ಮಾಡೋದೂ ಹೆಚ್ಚು.

ಮ — ಅದು ಬ್ಯಾರೆ ಕಾರಣಕ್ಕ.

[ ಏಬ್ರಾಂ ಬರುವನು ]

ಕ — ಬರ್ರಿ. ತಾಂಬೂಲ ತೊಗೊಳ್ರಿ.

ಏ — ( ನಿಂತೇ ) Thanks. ನನಗೆ ಸ್ವಲ್ಪ ಜರೂರ ಕೆಲಸ ಆದೆ. ನಾನು ಬರತೇನೆ. ನೀವು ಬೇಕಾದಾಗ ನಮ್ಮ ಕಡೆಗೆ ಬರಬಹುದು. ಸರ್ವೋತ್ತಮರಾವ್ ಎಲ್ಲಿದ್ದಾರೆ ?

ಕ — ಒಳಗಿದ್ದಾನೆ. ಸರ್ವೋತ್ತಮಾ !

[ ಸರ್ವೋತ್ತಮ ಬರುವನು ]

ಏ — ಬರತೇನೆ ಸರ್ವೋತ್ತಮರಾವ್ ! ಬೆಳಕುಗಳ ತಂದೆಯು ನಿಮಗೆ ದಾರಿ ತೋರಿಸಲಿ. ಬರತಾ ಇರ್ರಿ. ( ಎಲ್ಲರಿಗೂ ) ಬರತೇನೆ. ಬೇಗನೆ ಹೋಗಬೇಕಾಯಿತು. ಕ್ಷಮಿಸಿ. ಗುಡ್‌ಬಾಯ್ !

[ ಹ್ಯಾಟು ತೆಗೆದುಕೊಂಡು ಹೋಗುವನು ]

ಕ — ನಾವು ಇನ್ನೊಂದು ಸ್ವಲ್ಪ ಹೊತ್ತು ಕೂಡೋಣ ಬರ್ರಿ ಇಲ್ಲೆ.

[ ಜಮಖಾನಿಯ ಮೇಲೆ ಕುಳಿತುಕೊಳ್ಳುವರು ]

[ಸರ್ವೋತ್ತಮ ಏಬ್ರಾಂ ಕೂತ ಕುರ್ಚಿ, ಟಿಪಾಯಿ ಎತ್ತಿ ದೂರ ಇಟ್ಟು ಹೋಗುವನು]

[ ಚಿನ್ನಮುದ್ದಣ್ಣಾಚಾರ್ಯರು ಬರುವರು ]

ಚಿ — (ಗಡಿಬಿಡಿಯಿಂದ) ಭ್ರಷ್ಟಾಕಾರ ! ಭ್ರಷ್ಟಾಕಾರ ! ಧರ್ಮ ಹಾಳಾಗಿ ಹೋತ್ಯು ! ಹೊಲೇರ ಸಂಗತೀಲೆ ಕೂತು ತಿದ್ದಾಂಗ ಆತ್ಯೂ !

ಕ — ಏನು ಆಚಾರ? ಅದು ಹ್ಯಾಂಗ?

ಚಿ — ಡಾಕ್ಟರ ಸಂಗ್ತೀಲೆ ಕೂತಿದ್ದಿರೋ ಇಲ್ಲೋ?

ಕ — ಡಾಕ್ಟರ ಕ್ರಿಶ್ಚಿಯನ್.

ಚಿ — ಅಲ್ಲಾ, ಅಲ್ಲಾ. ರಾಯರs ಅಲ್ಲ. ಹೊಲೇರ ಸಾಂತಣ್ಣನ ಮಗ ಅಂವ. ಆತಿಲ್ಲೊ? ಅವನ ಸಂಗ್ತೀಲೆ ಸಹಪಂಕ್ತಿ ಮಾಡಿ ನಿಮ್ಮ ಕುಲ ಕೋಟಿ ಉದ್ಧಾರ ಆಯ್ತು!

ಢ — (ಕಾಲು ನಡುಗುತ್ತ ಬಂದು ಕುಳಿತು) ಏನು? ಆ ಡಾಕ್ಟರ ಹೊಲೇರಾತನ ಮಗನs! ರಾಮಾ! ರಾಮಾ!

ಕ — (ಆಸವಸೆಯಿಂದ) ನಿಮಗೇನು ಗೊತ್ತು ಅದೆಲ್ಲ?

ಚಿ — ಇದೇ ಈಗ, ಇದs ಕಿವಿಗಳಿಂದ, ಸಾಕ್ಷಾತ್ ಅವರ ಮುಖ ದಿಂದನs ಎಲ್ಲಾ ಐತಿಹ್ಯ ಶ್ರವಣಮಾಡಿ ಬಂದೇನಿ. ಡಾಕ್ಟರ ಚಿಕ್ಕಾವ ಇದ್ದಾಗ ಮಾಕ್ಷವಿಯೋಗ ಆಯ್ತು. ತತ್ಸಮಯ ಸಾಧಿಸಿ ಒಬ್ಬ ಪಾದ್ರಿ ಅವನ್ನ ಒಯ್ದು. ಕಲಿಸಿ ಡಾಕ್ಟರನ್ನ ಮಾಡಿದ. ತಮ್ಮ ಧರ್ಮದೀಕ್ಷಾ ಕೊಟ್ಟ. ತಾ ವಿಲಾಯಿತಿಗೆ ಹೋಗೂ ಮುಂಚೆ ಈತನ ತಂದೀ ಹೆಸರು, ಗುರುತು ಎಲ್ಲಾ ಹೇಳಿದ್ನಂತ. ಆದರಮ್ಯಾಲಿಂದನs ಇಬ್ಬರೂ ಒಬ್ಬರದೊಬ್ಬರ ಗುರುತು ಹಿಡಿದು ಮಾತಾಡಿಕೋತ ಹೊಂಟಿದ್ದರು.

ಮು — ಆದರೇನಾಯಿತು?

ಚಿ — ಮತ್ತಿನ್ನೇನು ಆಗಬೇಕು? ಧರ್ಮಸಂಕರ ಆಗಿಹೋತು.

ಸ — ಅವನೂ ದ್ವಿಜನೇ. ಜನ್ಮನಾ ಜಾಯತೆ ಶೂದ್ರಃ ಸಂಸ್ಕಾರಾತ್ ದ್ವಿಜ ಉಚ್ಯತೆ. ಅಂದಮ್ಯಾಲ ಧರ್ಮಸಂಕರ ಹ್ಯಾಂಗ ಆಗತದ?

ಚಿ — ಏ ಏ ಏನು ಹೇಳತಾರ ನಿಮ್ಮಂಥವರ ಮುಂದ? ಧ-ಧ-ಧರ್ಮಲಂಡರು!

[ ಕಾಲು ಅಪ್ಪಳಿಸುತ್ತ ಹೋಗುತ್ತಾರೆ ]

ಸ — ಹಃ ಹಃ ಹಃ ಶೇಷಂ ಕೋಪೇನ ಪೂರಯೇತ್.

ಢ — (ಕುಳಿತಲ್ಲಿಂದ) ಸರೂ, ನೀ ಹಾಂಗ ಆಚಾರ್ನ ಛೇಡಸಬಾರ ದಪ್ಪಾ. ಎಷ್ಟಂದರೂ ಅವರು ವೈದಿಕ ಬ್ರಾಂಬ್ರು (ನಿಂತಿರುವ ಅಂಜನೆಗೆ)

ಅಲ್ಲಾ, ಅದೇನಾರs ಇರಲಿ, ಅಂಜನಾಬಾಯಿ, ಇಷ್ಟೆಲ್ಲ ಗಡಿಬಿಡಿಯೊಳಗ ನೀನs ಚಹಾ ಕುಡೀಲಿಲ್ಲಲ್ಲ?

**ಅಂ** — ನಿಮ್ಮ ಜೋಡಿ ಕುಡೀತೀನಿ ಒಳಗ.

**ಢ** — ನಾ ಎಂದ ಮಣ್ಣಾ ಚಹಾ ಕುಡಿದಿದ್ದೆ! ಬಾ, ಕುಡಿ ಬಾ.

[ ಒಳಗೆ ಹೋಗುವರು ]

**ಢ**— ಸರೂ, ಆ ತಾಟು, ತಂಬಿಗಿ ಥಾಲಿ ಎಲ್ಲಾ ಬ್ಯಾರೆ ಒಯ್ದು ಇಡಪ್ಪಾ. ಸುಡ್ಲಿ, ಎಲ್ಲಾ ಏಕಾಕಾರ ಆಗಿಹೋಯ್ತು!

[ ಸರ್ವೋತ್ತಮ ಏಬ್ರಾಂಸ ಸಾಮಾನ ಒಯ್ಯುವನು ]

**ಮ** — ರಾಯರ. ನೀವು ನವಕರಿಗೆ ಒಪ್ಪೋ ಮೊದಲು ಆ ಕಟ್ಟಳಿ ಏನು ಕೇಳಿಕೊಂಡು ಒಪ್ಪರಿ.

**ಕ** — ಹಾಂಗs ಆಗಲಿ.

**ಮ** — ಒಳ್ಳೇದು, ನಾವಿನ್ನ ಹೋಗಿಬರೋಣs? ಬಹಳ ಸಂತೋಷ ಆಯ್ತು.

**ಕ** — ತಾವು ದೊಡ್ಡ ಮನಸ್ಸು ಮಾಡಿ ನಮ್ಮ ಮನಿಗೆ ಬಂದಿರಿ. ಸಂತೋಷ ಆಯ್ತು. ನಮ್ಮ ಹುಡುಗನ ಪ್ರಾಣ ಉಳಿಸಿದಿರಿ. ಆ ಉಪಕಾರ ಎಂದೂ ಮರೆಯೋ ಹಾಂಗಿಲ್ಲ.

**ಮ** — ನಾವು ಎಷ್ಟರವರು. ಎಲ್ಲಾ ನಡದಿರತದ. ಈ ಹುಡಿಗಿ ಮದಿವಿ ಒಂದು ಮಾಡಿ ಆಕಿನ್ನ ಗಂಡನ ಮನೀಗೆ ಕಳಿಸಿಬಿಟ್ಟೆ ಅಂದರ ನನ್ನ ಕೆಲಸ ಮುಗಿದ್ಹಾಂಗಾಯ್ತು.

**ಕ** — ಖರೇ ಅದ.

**ಮ** — ಇದು ನೋಡ್ರಿ, ಇದ್ದ ಆಸ್ತಿ ಎಲ್ಲಾ ಮಾರಿ ಬಂದ ಹಣಾ ಎಲ್ಲಾ ಈ ಹುಡಿಗಿ ಹೆಸರಿಲೆ ಒಂದು ಬ್ಯಾಂಕಿನಾಗ ಇಟ್ಟೇನಿ. ಯಾರು ಮಾಡಿ ಕೋತಾರೋ ಅವರಿಗೆ ಹೋಗತದ.

**ಕ** — ಹಂ, ಹಂs. ಎಷ್ಟು ಇಟ್ಟೀರಿ?

**ಮ** — ಅದ ಒಂದಿಪ್ಪತ್ತೈದು ಸಾವಿರ. ಎಲ್ಲ್ಯಾರ ನಿಮ್ಮ ಲಕ್ಷ್ಯದಾಗ ಚಲೋ ವರ ಇದ್ದರ ನನಗ ತಿಳಿಸಿರಿ.

ಕ — ಓಹೊ! ಅಗತ್ಯ. ವಿಚಾರಮಾಡಿ ತಿಳಿಸತೇನಿ. ನಿವಿಗ್ದಲ್ಲಿಗೇ ವರ ಬರತಾವೇಳ್ರಿ. ನೀವೇನೂ ಕಾಳಜಿ ಮಾಡಬ್ಯಾಡ್ರಿ.

ಮ — ಹಾಂಗ ಬಂದರೇನು ಬಂಗಾರಾಯ್ತು. ( ಏಳುತ್ತ ) ಆಗಲಿ, ಹೋಗಿಬರತೇನಿ. ನಮ್ಮ ಮನೀಗೂ ಒಂದು ದಿವಸ ಚಹಾಕ್ಕ ಎಲ್ಲಾರನ್ನೂ ಕರಕೊಂಡು ಬರ್ರೆಲ್ಲಾ.

ಕ — ಓಹೋ. ಅವಶ್ಯ ಬರೋಣ ಅದಕ್ಕೇನು.

ಮ — ( ಒಳಗಡೆ ನೋಡಿ ) ಅಂಜನಾ, ಅಂಜನಾ, ಹೋಗೋಣು ಬರ್ತೀಯಾ ?

ಅಂ — ( ಬರುತ್ತ ) ಓ, ಬಂದೆ.

[ ಧವಳಾಬಾಯಿ ಕಾಲುಸವರುತ್ತ ಸರ್ವೋತ್ತಮನ ಹಿಂದಿನಿಂದ ಬರುವಳು ]

( ಧವಳಾಬಾಯಿಗೆ ) ಅತ್ಯಾ, ಹೋಗಿ ಬರತೇನಿ. ( ನಮಸ್ಕರಿಸುವಳು )

ಧ —( ಕುಳಿತಲ್ಲಿಂದ ಕುಂಕುಮ ಹಚ್ಚಿ )ಹೋಗಿ ಬಾರವಾ. ಉಧಂಡಾಗು, ಮುತ್ತೈದಿ ಸಾವಿತ್ರಿ ಆಗು. ಬ್ಯಾಗನ ಮದಿವೀ ಮಾಡಿಕೊಂಡು ಗಂಡಸಮಗನ ತಾಯಿ ಆಗು !

ಮ + ಅಂ – ಬರತೇನಿ. ನಮಸ್ಕಾರ.

[ ಹೋಗುವರು ]

ಕ — ( ಕಳಿಸಿ ಬಂದು ) ಏಣ! ಮಲ್ಲಿನಾಥರಾಯರು ಸಾಕಷ್ಟು ಗಂಟು ಮಾಡಿದ್ಹಾಂಗ ಕಾಣಸ್ತದ ನೋಡು ! ಮತ್ತ ಬ್ಯಾರೆ ಗಂಡಸಮಕ್ಕಳು ಯಾರೂ ಇಧ್ಹಾಂಗ ಕಾಣಸಲಿಲ್ಲ !

ಧ – ( ಕುಳಿತೆ ) ಕೇಳಿದಿರೇನು ನೀವು ಅವರನ್ನ ?

ಕ — ಛೆ, ಮಾತಿನಾಗ ಹಾಂಗಣ ಬಂತು.

ಧ — ( ಸರಿದು ) ನಮ್ಮ ಸರೂಗ ಕೊಡತಾರೇನು ಹುಡಿಗಿನ್ನ ? ಕೊಟ್ಟರ ಮಾಡಿಕೊಂಡುಬಿಡೋಣ. ಹುಡಿಗಿ ಅಂತೂ ಬಂಗಾರ ಆಗ್ಯಾಳ.

ಕ — ನಾವೆಲ್ಲಾ ಹುಂ ಅಂದಿವಿ. ಸರ್ವೋತ್ತಮ ಒಂದು ಹುಂ ಅನ ಬೇಕಲ್ಲ ? ಹುಡಿಗೆಲ್ಲಾ ನೆಟ್ಟಗಿದ್ದಾಳ.

ಧ — ಈಗ ಕಣ್ಣಾಗ ತುಂಬಿತೇನೋ ! ( ಕಾಲುಸರಿಯುತ್ತ ಒಳಗೆ ಹೋಗುವಳು )

ಕ — ನಿನಗೇನು ತಿಳೀತದ ಮಣ್ಣು! (ತನ್ನ ಕೋಣೆಯಲ್ಲಿ ಹೋಗುವರು)

[ ಸರ್ವೋತ್ತಮು ಹೊರಗಿನಿಂದ ಬರುವನು ]

ಸ — ಹಃ ಹಃ ಹಃ ಅಂತೂ ಬ್ಯಾಂಕಿನ ದುಡ್ಡು ನಮ್ಮ ರಾಯರ ಬಾಯಾಗ ನೀರು ಒಡಿಸೇದ. ಇನ್ನೇನು ಸುಲಭ.

## ಹಾಡು

ರಾಗ : ದೇಶಿಕಾರ ತಾಳ : ರೂಪಕ

ಧನದ ಬಲವಿರೆ ಸಕಲ । ಜನಕೆ ಭಲಾ । ಘನಕಾಲ ॥ ಪ ॥
ಧನವಿರಲಾ ಪಾಪಿಯಲಾ । ರೆಣೆಸರಯ್ಯ ಕುಲಶೀಲಾ ॥
ಘನಸುಗಂಧವಿದೆಯಂದಾ । ಪುಸುಗು ಮೈಗೆ ಬಳಿವರಲಾ ॥ ೧ ॥

— ತೆರೆ —

---

## ಅಂಕ ~ ~ ~ ೪

### ದೃಶ್ಯ ೧.

[ ಕನಕರಾಯರ ಮನೆಯ ಪಡಸಾಲೆ ]

[ ಮೊದಲ ಅಂಕಿನಲ್ಲಿಯಂತೆ ರಂಗರಚನೆ. ಸರ್ವೋತ್ತಮ ಒಂದು ಕುರ್ಚಿಯ ಮೇಲೆ ಕುಳಿತು ಕಾಲುಗಳನ್ನು ಟೇಬಲ್ಲ ಮೇಲೆ ಹಾಕಿ ಪುಸ್ತಕ ಓದುತ್ತಿದ್ದಾನೆ. ಗೂಟದಲ್ಲಿ ಬಿಳಿ ಲಂಗ ಅಂಗಿ ವಸ್ತ್ರ ಇವೆ. ಧವಳಾಬಾಯಿ ಕಟ್ಟಿದ ಕಾಲನ್ನು ಹಿಡಿದುಕೊಂಡು ಬಾಗಿಲದ ಹೊಸ್ತಿಲ ಹತ್ತಿರ ಕುಳಿತಿದ್ದಾಳೆ. ]

ಧ — ( ನರಳುತ್ತ ) ಸರೂ, ಇನ್ನೂ ಎಷ್ಟು ದಿವಸಪ್ಪಾ ಸುಟ್ಟುಬಗ್ಲಿ, ಹಿಂಗs ಕಾಲು ಕಟ್ಟಿಕೊಂಡು ಮೈಲಿಗೀಲೆ ತಿನ್ನೋದು ?

ಸ — ಗಾಯ ಮಾಯೋತನಕ ತಿನಬೇಕು. ಇನ್ನೇನು ಬಹಳ ದಿವಸ ಹಿಡೀಲಿಕ್ಕಿಲ್ಲ ಅನ್ನು. ಬ್ಯಾನಿ ಬ್ಯಾಸರಿಕೆ ಬಂದಾಗ ಅವನ್ನೆಲ್ಲಾ ನೋಡ ಬಾರದೂ ಅಂತ ಶಾಸ್ತ್ರಾನ ಹೇಳತಾವು.

ಧ — ನಿನ್ನ ಶಾಸ್ತ್ರಾನs ಬ್ಯಾರೆ. ನಮ್ಮ ಆಚಾರ್ರು ಹೇಳತಾರೇನು ?

ಸ — ನಿಮ್ಮ ಆಚಾರ್ರು, ನೀವು. ತೀರಿಹೋಯಿತು !

[ ಚಿನ್ನಮುದ್ರಣ್ಣಾಚಾರ್ಯರು ಪ್ರಾತಃಕಾಲದ ಉಡುಪಿನಲ್ಲಿ ಪ್ರವೇಶಿಸುವರು. ಒಂದು ಶಾಲು ಹೊದ್ದಿದ್ದಾರೆ; ಒಂದು ಶಾಲು ತಲೆಗೆ ಸುತ್ತಿದ್ದಾರೆ. ಕೈಯಲ್ಲಿ ಹೂ ತುಳಸಿ ತುಂಬಿದ ಬುಟ್ಟಿಯನ್ನು ಹಿಡಿದಿದ್ದಾರೆ. ಬಾಯಲ್ಲಿ ದೇವರನಾಮ ಉಚ್ಚರಿಸುತ್ತಿದ್ದಾರೆ. ]

ಚಿ — ( ಬಂದು ) ಏನು ಸರ್ವೋತ್ತಮರಾಯಾ, ಏನೋ ನಡದಿತ್ತಲ್ಲ, ಆಚಾರವ್ಯಾಲ ?

ಸ — ಏನಿಲ್ಲ ಆಚಾರಸ್ವಾಮಿ. ನಮ್ಮವ್ವಗ ಒಂದು ಶಂಕಾ ಬಂದದ. ಬ್ಯಾನಿಬ್ಯಾಸರಿಕಿಯೊಳಗ ಮೈಲಿಗೀಲೆ ಉಣ್ಣಲಿಕ್ಕೆ ಬರತದೋ ಇಲ್ಲೋ? ನೀವs ಹೇಳಬೇಕಂತ.

ಚಿ — ಓಹೋ ! ಆಪದ್ಧರ್ಮ ಅಂತ ಬರತದ. ( ಬಾಯಿಗೆ ) ಬಾಯರ, ಈಗ ಹ್ಯಾಂಗದ ಕಾಲು ?

ಧ — ಸ್ವಲ್ಪ ಕಡಿಮೆ ಆಗೇದ. ಆದರೂ ಇನ್ನೂ ಅಡ್ಡಾಡಲಿಕ್ಕೆ ಆಧಾರ ಬೇಕಾಗತದ. ದಿನಾ ಡಾಕ್ಟರು ಬಂದು ಕಟ್ಟಿ ಹೋಗತಾರ.

ಚಿ — ಏನು, ಡಾಕ್ಟರ ಕೈಯ್ಯಾಗ ಒಮ್ಮೆ ಸಿಕ್ಕಿತೂ ಅಂದ್ರ ಜೀವ ಹೋಗೋತನಕ ಬಿಡೂದಿಲ್ಲ. ( ಸರ್ವೋತ್ತಮನಿಗೆ ) ಏನು ರಾಯರ, ನಿಮ್ಮ ನೌಕರಿ ಬಗ್ಗೆ ಏನಾದರೂ ಹೇಳಿದರೇನು ?

ಸ — ಇನ್ನೂ ಇಲ್ಲ. ಇವತ್ತ ಹೇಳಿದರೂ ಹೇಳಬಹುದು. ಬರೋ ಹೊತ್ತು ಆಗೇದ, ಈಗ ಬಂದರೂ ಬಂದಾರು.

ಚಿ — ಒಳಗ ಹೋಗಿ ಇವಿಷ್ಟು ಹೂ ತುಳಸಿ ಇಟ್ಟು ಬರತೇನಿ.

[ ಧವಳಾಬಾಯಿ ಸಹಿತ ಒಳಗೆ ಹೋಗುವರು ]

[ ತೆರೆಯುಲ್ಲಿ ]

ಏ — ಸರ್ವೋತ್ತಮರಾವ್ !

ಸ — ಓ ಬಂದೆ.

[ ಹೋಗಿ ಏಬ್ರಾಂ, ಮಲ್ಲಿನಾಥರಾಯರನ್ನು ಕರಕೊಂಡು ಬರುವನು ]

ಏ — ಕನಕರಾಯರು ಮನೆಯಲ್ಲಿಲ್ಲವೇನು ?

ಸ—(ಕುಳಿತುಕೊಳ್ಳಲು ಕುರ್ಚಿ ಸರಿಸುತ್ತ)ಇಲ್ಲೆ ಹೊರಗೆ ಹೋಗಿದ್ದಾರೆ. ಇದೇ ಈಗ ಬರಬಹುದು. ಒಲ್ರಿ. ಕೂಡ್ರಿ. ಅವ್ರನ್ನ ಇಲ್ಲೆ ಕರೆದು ಬರತೇನಿ [ ಕುಳಿತುಕೊಳ್ಳುವರು ]

[ ಕನಕರಾಯರು ಬರುವರು ]

ಏ — ಓ ! ಬಂದೇಬಿಟ್ರಲ್ಲ !

[ ನಮಸ್ಕಾರ-ಚಮತ್ಕಾರ ಆಗಿ ಕೋಟು ರೂಮಾಲ ತೆಗೆದಿಟ್ಟು ಬರುವರು. ]

ಕ — (ಕುಳಿತು) ಸರ್ವೋತ್ತಮಾ ! ಊರಿ ಇಲ್ಲೇನು ? ಡಾಕ್ಟರು ಬಂದಾರಂತ ಹೇಳು.

[ ಸರ್ವೋತ್ತಮ ಒಳಗೆ ಹೋಗುವದರೊಳಗಾಗಿ ಧವಳಾಬಾಯಿ ಬರುವಳು ]

ಏ — ಹೇಗಿದೆ ಬಾಯಿಯವರೆ ಕಾಲು ? ನೋವು ?

ಧ — ಅಷ್ಟೇನು ಇಲ್ಲ.

ಏ — ಹಾಗಾದರೆ ಆ ಪಟ್ಟಿಯು ಈ ಹೊತ್ತೂ ಇರಲಿ. ಪರಲೋಕವ

ತಂದೆಯ ಕೃಪೆಯಿಂದ ಬೇಗನೆ ಗುಣವಾಯಿತು.

ಕ — (ಕೆಳಗೆ ಕೂಡಲು ಬರುವ ಏಬ್ರಾಂಗೆ) ಡಾಕ್ಟರೆ, ಅಲ್ಲಿಯೇ ತಾವು ಕುರ್ಚಿಯ ಮೇಲೇ ಕೂಡಬಹುದು.

ಏ — ಬೇಡ. ನಾನೂ ನಿಮ್ಮ ಜೊತೆಗೇ ಕೂಡುತ್ತೇನೆ.

ಸ — ಎಲ್ಲರೂ ಕುರ್ಚಿಯ ಮೇಲೆ ಕೂತುಕೊಳ್ಳಬಹುದು. ಇನ್ನೊಂದು ತಂದು ಹಾಕುತ್ತೇನೆ.

[ ತಂದು ಹಾಕಿ ಹೋಗುವನು ]

[ ಕುರ್ಚಿಯ ಮೇಲೆ ಕುಳಿತುಕೊಳ್ಳುವರು ]

ಮ — ಡಾಕ್ಟರ್, ಮುಂಬೈ ಆಫೀಸಿನಿಂದ ಏನಾದರೂ ಬರೆದು ಬಂತೇನು ಸರ್ವೋತ್ತಮರಾಯರ ಬಗ್ಗೆ ?

ಏ — ಬಂದಿದೆ. ಆ ಜಾಗ ಐದು ನೂರು ರೂಪಾಯಿ ಸಂಬಳದ್ದಿದೆಯಂತೆ.

ಕ — ಕೊಡುವರಾಗಿ ಆಶ್ವಾಸನ ಕೊಟ್ಟಿದ್ದಾರೇನು ?

ಏ — ಕೊಟ್ಟಿದ್ದಾರೆ.

ಕ — ಎಂದು ನೇಮಿಸಿಕೊಳ್ಳುತ್ತಾರಂತೆ ?

ಏ — ನಾನು ಬರೆದ ಕೂಡಲೆ ಆಗಬಹುದು.

ಕ — ನಾಳೆ ಬರೆಯುತ್ತೀರಾ ?

ಏ — ಸರ್ವೋತ್ತಮರಾಯರ ಒಪ್ಪಿಗೆ ಇದೆಯಷ್ಟೇ ?

ಕ — ಇರದೆ ಏನು ?

ಏ — ಹಾಗಾದರೆ ಆದೀತು. ಆದರಲ್ಲಿ ಮುಕ್ಕಾಲು ಪಾಲು ಆಗಿಯೇ ಹೋಗಿದೆ. ಇನ್ನುಳಿದದ್ದು ಸ್ವಲ್ಪ.

ಕ — ಏನು, ಹೇಳಿದರೆ ಅದನ್ನೂ ಮಾಡಿಬಿಡಬಹುದು.

ಏ — ಏನಿಲ್ಲ. ಏನಿಲ್ಲ. ಆ ಜಾಗಾ ಕ್ರಿಶ್ಚಿಯನ್ನರಿಗೇ ಎಂದು ಕಾಯ್ದು ಇಟ್ಟಿದೆಯಂತೆ. ಅದೇನು ದೊಡ್ಡ ಮಾತಲ್ಲ.

ಮ — ಓಹೊ ! ಹೀಗೇನು ? ರಾಯರೆ, ನಿಮ್ಮ ಮಗನಿಗೆ ಆ ಜಾಗ ಬೇಕಾಗಿದ್ದರೆ ಕ್ರಿಶ್ಚಿಯನ್ನನಾಗಬೇಕು. ಮುಕ್ಕಾಲು ಪಾಲು ಆಗಳೆ ಆಗಿದ್ದಾ

ನಂತೆ. ಉಳಿದ ಒಕ್ಕಾಲು ಪಾಲೂ ಆಗಿಬಿಟ್ಟರೆ ತೀರಿತು. ನೌಕರಿ ನಿಮ್ಮ ಪದರಿನಲ್ಲಿ.

ಏ — ( ವ್ಯಂಗ್ಯ ತಿಳಿಯದೆ) ಮಲ್ಲಿನಾಥರಾಯರು ಸರಿಯಾಗಿ ಹೇಳಿದರು. ಏನೂ ಉಳಿದಿಲ್ಲ; ಎಲ್ಲಾ ಆಗಿದೆ. ಬ್ಯಾಪ್ಟಿಜಂ ಒಂದೇ ಬಾಕಿ.

ಚಿ — ಏನು ಸರ್ವೋತ್ತಮರಾಯರು ಕ್ರಿಶ್ಚಿಯನ್ನರಾಗಿದ್ದಾರೇನು ?

ಏ — ನಮ್ಮ ನೀರು ಕುಡಿದಿದ್ದಾರೆ. ನಮ್ಮಿಂದ ಆಹಾರ ಸೇವಿಸಿದ್ದಾರೆ. ನಮ್ಮ ಬೈಬಲ್ಲೂ ಓದಿದ್ದಾರೆ. ಇಷ್ಟಾದ ಮೇಲೆ ನಿಮ್ಮ ರಾಯರ ಬ್ರಾಹ್ಮಣಿಕ ಎಲ್ಲಿ ಉಳಿಯಿತು ?

ಕ — ಆಂ! ಹೀಂಗದೇನು ನಿಮ್ಮ ಬಲಿ ?

ಚಿ — ಔಷಧದೊಳಗಿನ ನೀರು ಕುಡಿದರ ಬ್ರಾಹ್ಮಣತ್ವ ಹೋಗತದೇನು ? "ಔಷಧಂ ಜಾಹ್ನವೀ ತೋಯಂ ವೈದ್ಯೋ ನಾರಾಯಣೋ ಹರಿಃ" ಅಂತ ಅದ. ಅಲ್ಲೇನ್ರಿ ರಾಯರ ?

ಮ — ಯಾರ ಮಾತು ಸರಿ ಅಂತ ಹೇಳಬೇಕು ?

ಚಿ — ಅಷ್ಟು ಗೊತ್ತಾಗುದೆಲ್ಲೇನ್ರಿಪಾ? "ಅಜ್ಞಾನೇನ ಕೃತಂ ಪಾಪಃ ಪಶ್ಚಾತ್ತಾಪೇನ ಶುದ್ಧ್ಯತಿ."

ಮ — ( ನಗುತ್ತ ) "ನತು ಪಶ್ಚಾತ್ತಾಪೇನ ಮಾತ್ರಂ, ಕಿಂತು ಪಂಚಗವ್ಯ ಪ್ರಾಶನೇನ ಚ. "

ಏ — ನಾನು ಕೇಳಿದ್ದಕ್ಕೆ ನಿಮ್ಮ ಉತ್ತರ ಏನಿದೆ ?

ಸ — (ಒಳಗಿನಿಂದ ಬಂದು) ಡಾಕ್ಟರಸಾಹೇಬ, ನನ್ನ ಉತ್ತರ ಇಲ್ಲಿದೆ, ಕೇಳಿರಿ. ತಾವು ನನಗಾಗಿ ಪಟ್ಟ ಶ್ರಮಕ್ಕೆಲ್ಲ ವಂದನೆಗಳು. ಆದರೆ ತಮ್ಮ ಅಪೇಕ್ಷೆಯಲ್ಲಿ ತಾವು ನಿರಾಸೆ ಹೊಂದಬೇಕಾಗುವದು. ನಾನು ಕ್ರಿಶ್ಚಿಯನ್ನನಾಗುವದೂ ಬೇಡ; ನಿಮ್ಮ ಆ ಐದುನೂರು ರೂಪಾಯಿ ಸಂಬಳದ ನೌಕರಿಯೂ ಬೇಡ. ಈ ರೀತಿಯಾಗಿ ನೌಕರಿ, ಹೆಣ್ಣು, ದುಡ್ಡಿನ ಆಸೆ ಹಚ್ಚಿ ಜನರನ್ನು ಮತಾಂತರಗೊಳಿಸುವದು ನಿಮಗೆ ತರವಲ್ಲ. ಒಟ್ಟು, ಸಮಾಜದ ಕಟ್ಟಡವೇ ಅದುರಹತ್ತಿದೆ! ನೀವೇನು ? ಯಾರೇನು ? ಎಲ್ಲರೂ ಪತಿತರು!

ಏ — ( ಏಳುತ್ತ ) ಪತಿತರನ್ನು ಉದ್ಧಾರ ಮಾಡಲಿಕ್ಕೆಂತಲೇ ನಾವು

ಯತ್ನಿಸುತ್ತಿರುವದು. ದಲಿತವರ್ಗದವರನ್ನು ನಮ್ಮ ಶ್ರೇಷ್ಠವಾದ ಧರ್ಮದಲ್ಲಿ ಹಾಕಿಕೊಂಡು ಅವರನ್ನು ಉಚ್ಚಜಾತಿಯಲ್ಲಿ ಸೇರಿಸುತ್ತೇವೆ. ಅವರು ಕ್ರಿಶ್ಚಿಯನ್ನರಾದ ಕೂಡಲೆ ನೀವೇ ಅವರ ಕೂಡ ಬಳಕೆ ಮಾಡುತ್ತೀರಿ! ಹಃ ಹಃ ಹಃ

ಸ — ಜಾತಿಯನ್ನು ಬದಲು ಮಾಡಿದ ಮಾತ್ರಕ್ಕೆ ಅವರನ್ನು ಉದ್ಧಾರ ಮಾಡಿದಂತಾಗಲಿಲ್ಲ ಡಾಕ್ಟರಸಾಹೇಬ! ಗುಣಗಳು ಜಾತಿಯನ್ನು ನೋಡಿ ಬರುವದಿಲ್ಲ ಜನರಿಗೆ ಉಪಕಾರ ಮಾಡೋ ನೆವದಿಂದ ಅವರನ್ನು ಮತಾಂತರಗೊಳಿಸುತ್ತಿರುವ ನಿಮ್ಮ ಈ ಕಾರ್ಯವೆ ಮೊದಲು ಅಧರ್ಮವಾಗಿದೆ. ಅದನ್ನು ನೀವು ಮಾಡಬಾರದು.

ಏ — ಅಜ್ಞಾನದ ಕತ್ತಲೆ ತುಂಬಿಹೋಗಿದೆ. ಮಾಡುವದೇನು?

ಸ — ನಿಮ್ಮ ಪರಲೋಕದ ತಂದೆಯು ಸಹಾಯಮಾಡಲಿಲ್ಲೇನು?

ಕ — ಡಾಕ್ಟರಸಾಹೇಬ, ತಮ್ಮ ಬಿಲ್ಲನ್ನಷ್ಟು ಕಳಿಸಿಬಿಡತೀರೇನು?

ಏ (ಹೋಗುತ್ತ) ಆಗಲಿ. ತಾವೆಲ್ಲರೂ ಜ್ಞಾನವಂತರು. ಇನ್ನೂ ಪೂರ್ಣ ವಿಚಾರಮಾಡಬೇಕೆಂದು ನನ್ನ ನಮ್ರವಾದ ಬಿನ್ನಹವಿದೆ. ಪರಲೋಕದ ತಂದೆಯನ್ನು ನೆನೆದರೆ ಅವನು ನಿಮಗೆ ಒಳ್ಳೆಯ ಬುದ್ಧಿಯನ್ನು ಕೊಡುವನು. Bye! Bye!

[ ಹೋಗುವನು ]

ಮ — ಏನೇ ಆದರೂ ಇವರ ತಾಳ್ಮೆ ಮಾತ್ರ ಹೆಚ್ಚಿನದು! ಸರ್ವೋತ್ತಮರಾಯರು ಸರಿಯಾದ ಉತ್ತರ ಕೊಟ್ಟರು. ಉತ್ತಮ ವಿಚಾರಸರಣಿ ಅವರದು!

ಕ — ವಿಚಾರೆಲ್ಲ ಉತ್ತಮ ಆದವು; ಆದರ ಮುಂದೇನು?

ಮ — ಸರ್ವೋತ್ತಮರಾಯರ ವಿಚಾರ ಏನದ? ಮುಂದೆ ಏನು ಮಾಡಬೇಕಂತಾರ?

ಕ — ಮತ್ತೇನಿನ್ನ. ಕುರಿಕಾಯ್ದಾಂಗ ಹುಡುಗರನ್ನ ಕಾಯೋ ಮಾಸ್ತರಕಿ ಇದಲ್ಲ.

ಸ — (ಧೈರ್ಯದಿಂದ) ಮುಂದ ಬರೋ ಹೊಸ ನಾಗರಿಕರನ್ನ ತಯಾರುಮಾಡೋ ಕೆಲಸ ಕುರಿಕಾಯೋ ಕೆಲಸ! ಇಂಥಾ ವಿಚಾರಿದ್ದ

ನಮ್ಮ ದೇಶ ಹ್ಯಾಂಗ ಮುಂದ ಬರಬೇಕು?

**ಚಿ** — ಇನ್ನೂ ಎಷ್ಟು ಮುಂದ ಬರಬೇಕು, ಸರ್ವೋತ್ತಮರಾಯಾ! ಜಾತಿ ಹೋಯಿತು; ನೀತಿ ಹೋಯಿತು; ಧರ್ಮ ಹೋಯಿತು; ಹೆಣ್ಣು-ಗಂಡು ಸಮಾನರಾದರು. ಮತ್ತಿನ್ನೇನುಳಿದದ?

**ಮ** — ನಾವು ನೀವು ಉಳಿದೀವಲ್ಲ?

**ಸ** — ವ್ಯಕ್ತಿಧರ್ಮ, ಸಮಾಜಧರ್ಮ, ರಾಷ್ಟ್ರಧರ್ಮ ಇವು ಬೇರೆ ಬೇರೆ ಇದ್ದರೂ ಒಂದಕ್ಕೊಂದು ಅಧೀನ ಅವ. ಒಂದರೊಳಗೊಂದು ಲೀನ ಆಗತಾವ, ವರ್ತುಳದೊಳಗಿನ ವರ್ತುಳದಂತೆ.

**ಚಿ** — ಇವೆಲ್ಲಾ ಮಾತಾಡೋ ಮಾತು. ವ್ಯವಹಾರ್ಯ ಅಲ್ಲ, ಸರ್ವೋತ್ತಮರಾಯಾ.

**ಸ** — ಆಚಾರ್ಯಸ್ವಾಮಿ, ಇವನ್ನ ವ್ಯವಹಾರ್ಯಮಾಡೋದಂದರ ಶಿಕ್ಷಣ ಕೊಡೊದು. ಅದೇ ಶಿಕ್ಷಕನ ಕೆಲಸ. ಕುರಿ ಕಾಯೋದಲ್ಲ.

**ಮ** — ಸರಿಯಾದ ಮಾತು.

**ಕ** — ನಮಗ ಇವೆಲ್ಲಾ ತಲ್ಯಾಗ ಹೊಗೂದಿಲ್ಲ ನೋಡ್ರಿ ರಾಯರ. ನಮ್ಮ ಮಾರ್ಗನ ಬ್ಯಾರೆ. ಹಿಂದಿನಿಂದ ನಡಕೋತಾ ಬಂದ ಪರಂಪರಾ ಬಿಡು ಅಂದರ ನಮ್ಮಿಂದ ಆಗದ ಮಾತು. ಗೃಹಸ್ಥ ಆದಾಂವ ಇವನ್ನೆಲ್ಲಾ ವಿಚಾರ ಮಾಡಿ ನೋಡಬೇಕಾಗತದ. ತಾಳ್ಮೆಯಿಂದ ಇದ್ದ ಸಮಾಜ-ನಿರ್ಬಂಧಗಳನ್ನೆಲ್ಲ ಪಾಲಿಸಲೇಬೇಕಾಗತದ.

**ಚಿ** — ಹಂ, ಇದು ಬರಾಬ್ಬರಿ ಮಾತು. ಅಲ್ಲಪಾ ಸರ್ವೋತ್ತಮ ರಾಯಾ, ಬೇಕಾದ ಜಾತಿಯವರು ಬೇಕಾದ ಜಾತಿಯವರ ಸಂಗ್ತೀಲೆ ಊಟ ಮಾಡಬೇಕಲ ಹ್ಯಾಂಗ? ಮದಿವಿ ಮಾಡಕೋಬೇಕಲ ಹ್ಯಾಂಗ? ನಿನ್ನ ಅಭಿಪ್ರಾಯ ಏನದಪಾ?

**ಸ** — ಈ ವಿಷಯ ಬ್ಯಾರೆ ಶಾಸ್ತ್ರದ ವಿಷಯ. ಅವನ್ನ ತಿಳಕೊಳ್ಳದೇ ಇರೋದರಾಗಽ ನಿಮಗ ಕ್ಷೇಮ ಅದ. ವಿಷಯ ಹಾರಸತೀನಿ ಅಂತ ತಿಳಕೋ ಬ್ಯಾಡರಿ. ಹೇಳಿದರ ನಿಮಗ ಸಮಾಧಾನ ಆಗೂದಿಲ್ಲ ಅಂತ ಬಿಡತೀನಿ. ಬಹಳ ದಿವಸಗಳಿಂದ ಬಂದ ಸಂಸ್ಕಾರ ಬಿಡಬೇಕೆಂದರೆ ಕಠಿಣ ಅನಸ್ತದ. ಆದರ

ನಿಮಗೆ ತಿಳಿಯದೆ ನಿಮ್ಮ ಸುತ್ತಲಿನ ಸಮಾಜ ಬದಲಾಗತಿರತದ. ನೀವೂ ನಿಮ್ಮ ಜೀವನ ಅದಕ್ಕ ಹೊಂದಿಸಿಕೊಂಡು ಸಾಗಿಸ್ತೀರಿ. ಆದರ ಹೀಂಗ ನಡೆವದ ಅಂಬೋದೇ ನಿಮಗ ತಿಳಿಯೂದಿಲ್ಲ. ಅದೇ ವಿಚಿತ್ರ.

ಮ — ವಿಚಾರ ಮಾಡೋಹಂಗ ಅವ ಮಾತು !

ಕ — ಇಷ್ಟು ದಿವಸ ಹಗಲೂ ರಾತ್ರಿ ಕೂತುಕೊಂಡು ಪುಸ್ತಕ ಓದಿದ್ದರ ಪರಿಣಾಮ ಇದು !

ಮ — ( ನಗುತ್ತ ) ಅಂದರ ಅದೇನು ಛಲೊ ಅಂತೀರೋ, ಕೆಟ್ಟ ಅಂತೀರೊ ?

ಕ — ಛಲೊ ಎಲ್ಲಾ ಖರೆ. ಆದರ ಮುಂದೇನು ? ಪ್ರಯೋಜನಕ್ಕ ಬಾರದ ವಿದ್ಯಾ !

ಮ — ಹಾಂಗ ಅಂದರ ಹ್ಯಾಂಗ; ಮುಂದ ಪ್ರಯೋಜನಕ್ಕ ಬಂದೀತು.

ಕ — ಅದು ಹೋಗಲಿ ಬಿಡ್ರಿ. ಈ ಒಣಾ ಮಾತಿನಾಗ ನೀವು ಯಾಕ ಬಂದಿದ್ದಿರಿ ಅಂತ ಕೇಳೋದನ್ನs ಮರತ-ಬಿಟ್ಟೆ.

[ ಸರ್ವೋತ್ತಮ ಒಳಗೆ ಹೋಗುವನು ]

ಮ -- ನಮ್ಮ ಅಂಜನಾನ ಸಲುವಾಗಿ ವರ ಕೇಳಿದ್ದೆನಲ್ಲ. ತಿಳಕೊಂಡು ಹೋಗಬೇಕೂ ಅಂತ ಬಂದಿದ್ದೆ. ಮತ್ತ ಧವಳಾಚಾರ್ಯರ ಕಾಲಿನ ಗಾಯ ನೋಡಿಕೊಂಡು ಹೋದ್ಹಾಂಗೂ ಆತು.

ಚಿ — ಇಲ್ಲೇ ಕನಕರಾಯರ ಮಕ್ಕಳs ಇದ್ದಾರಲ್ಲ ವರ. ಯಾಕ ಕೊಡಬಾರದು ?

ಮ — ನಮ್ಮದೇನು, ನಿಂತಕಾಲಮ್ಯಾಲ ಒಪ್ಪಿಗಿ ಅದ. ಅವರ ಒಪ್ಪಿಗಿರಬೇಕಲ್ಲ ?

ಧ — ( ಕಾಲು ಸರಿಯುತ್ತ ಬಂದು ಬಾಗಿಲಿಗೆ ಕುಳಿತು ) ನಮ್ಮದೂ ಎಲ್ಲಾ ಒಪ್ಪಿಗಿ ಅದ. ಆದರ ........

ಕ — ಬಂದಿರೇನು ನಡುವೆ ಬಾಯಿಹಾಕಲಿಕ್ಕೆ? ನಿಮಗೇನು ತಿಳೀತದ ಇದರಾಗ ? ( ರಾಯರಿಗೆ ) ಅದೇನು ಹೆಣಮಕ್ಕಳ ಮಾತು ಬಿಡ್ರಿ. ಇನ್ನೂ

ನೌಕರಿ ಸಿಕ್ಕಮ್ಯಾಲ ಮದಿವಿ ವಿಚಾರ ಅದಕ್ಕs ನೆಲಿ ಇಲ್ಲ ಇನ್ನೂ.

**ಧ** — ಇವತ್ತಿಲ್ಲ ನಾಳೆ ಹಿಡೀತಾನ. ಏನು ಹಂಗs ಮನ್ಯಾಗ ಕೂಡತಾನೇನು? ಕೆಲಸ ಇಲ್ಲ ಅಂತ ಮದಿವಿ ಖೋಳಂಬಿಸಿಕೊಂಡು ಕೂಡೋದದ ಏನು? ಹುಡಿಗಿ, ಬಂಗಾರದಂಥಾ ಹುಡಿಗಿ! ಅನಾಯಾಸ ಬಂದದ ಮನೀ ತನಕ. ಯಾಕ ಒಪ್ಪಿಕೊಂಡುಬಿಡಬಾರದೂ ಅಂತೀನಿ ?

**ಕ** — ಸುಮ್ಮನ ಯಾಕ ಮಾತಾಡತೀರಿ? ಲೌಕಿಕದ ಮಾತು ಇರತಾವ ಅವೆಲ್ಲ. ಆದರಾಗ ಯಾಕ ನೀವು ಕೈಹಾಕತೀರಿ ?

**ಧ** — ಅದೇನೋ ಏಂತೋ ನಿಮ್ಮ ಲೌಕಿಕ! ನನಗ ತಿಳಿಯೂದಿಲ್ಲ. ಇದ್ದ ಮಾತು ಹೇಳಿದೆ.ಬೇಕಾದರ ಒಪ್ಪರಿ, ಸಾಕಾದರ ಬಿಡ್ರಿ. ಮನೀಗೆ ನೊಸಿ ಬಂದದ್ದನ್ನು ನೋಡಬೇಕೂ ಅಂತ ಅದ. ನಿಮಗ ತಿಳಿದ್ಹಾಂಗ ಮಾಡ್ರಿ.

[ ತೆರೆಯಲ್ಲಿ ]

[ ಅಂಚೆಯವ "ಕನಕರಾವ್ ದೇಶಪಾಂಡೇ" ಎಂದು ಕವ್ಹರ ಒಗೆಯುವನು ]

**ಕ**—( ಎದ್ದು ಹೋಗಿ ಅದನ್ನು ತೆಗೆದುಕೊಂಡು ಬಂದು ಕುರ್ಚಿಯಲ್ಲಿ ಕುಳಿತು) ಯಾರದಿರಬೇಕು ಈ ಪತ್ರ ? ( ಒಡೆದು ) ಓ ! ಇವರದೂ !

**ಧ** — ಯಾರದು ಪತ್ರ ?

**ಕ** — ನಿಮ್ಮ ಅಳಿಯಂದೇವರು ಶ್ರೀವಲ್ಲಭರಾಯರ ಪತ್ರ !

**ಧ** — ಅಂಹ ! ಎಲ್ಲಿಂದ ಬರದಾರ ?

**ಕ** — ಏಳೂರಿಂದ ಬರದಾರ.

**ಧ** — ಏನಂತ ಬರದಾರ ?

**ಕ** — ಇವತ್ತ ಐದು ಘಂಟೇಕ್ಕ ಇಲ್ಲಿಗೆ ಬರತಾರಂತ, ಮೋಟರ ಕಾರಿನಿಂದ.

**ಚಿ** — ( ನಕ್ಕು ಏಳುತ್ತ ) ಶ್ರೀವಲ್ಲಭರಾಯರು ಬರತಾರs ! ದೇವರ ಮಹಿಮಾ ಇದು ಧವಳಾಬಾಯರ ! ನಿಮ್ಮ ದೇವರೂ ಬ್ರಾಂಬರೊಳಗಿನ ವಿಶ್ವಾಸ ಅವರನ್ನ ತಿರಿಗಿ ಕರಕೊಂಡು ಬಂತು. ಬಂದರೂ ಅಂದರ ಒಂದು ಸತ್ಯನಾರಾಯಣಪೂಜಾ ಮಾಡಿಸಿಬಿಡ್ರಿ.

**ಧ** — ಅಗತ್ಯ ಮಾಡಿಸೋಣು, ಆದರಾಗೇನು. ( ರಾಯರಿಗೆ )

ಯಾರ್‍ಯಾರು ಅಂತ ಬರದಾರೇನು ?

**ಕ** — ಅದನ್ನೇನು ಬರೆದಿಲ್ಲ. ( ರಾಯರಿಗೆ ) ಇದೂ ಒಂದು ಯೋಗಾ ಯೋಗ ನೋಡಿರಿ ಮಲ್ಲಿನಾಥರಾವ್ ! ನಮ್ಮ ಅಳಿಯಂದಿರು ಹದಿನೈದು ವರ್ಷದ ಮ್ಯಾಲ ಇವತ್ತ ಬರತಾರ !

**ಮ** — ಹಂ, ಹಿಂಗೇನು ? ಅನಪೇಕ್ಷಿತನs ಅನಬೇಕು ! ಆಗಲಿ, ಹಂಗಾರ ಅಳಿಯಂದಿರ ಸ್ವಾಗತಕ್ಕ ವ್ಯವಸ್ಥೆ ನಡೆಯಲಿ. ನಾ ಬರತೇನಿ. ವರದ ಸಲುವಾಗಿ ಒಂದಿಷ್ಟು ಲಕ್ಷ್ಯದಾಗ ಇಟ್ಟಿರ್ರಿ ಆಯಿತು. ( ಎದ್ದು ) ಏನು, ಸರ್ವೋತ್ತಮರಾವ್ ಒಳಗ ಇದ್ದಾರ ಕಾಣತದ.

**ಕ** — ಕರೀತೀನಿ ನಿಂದರ್‍ರಿ, ( ಒಳಗೆ ) ಸರ್ವೋತ್ತಮಾ ! ಮಲ್ಲಿನಾಥ ರಾಯರು ಹೊರಟು ನಿಂತಾರ, ಬಾ.

**ಸ** — ( ಹೊರಗೆ ಹೋಗುವ ತಯಾರಿಯಲ್ಲಿ ಬಂದು ) ಬಂದೆ. ನನಗೂ ಹೊರಗೇ ಹೋಗಬೇಕಾಗಿತ್ತು.

**ಧ** — ಸರೂ, ಬಹಳೊತ್ತು ಹೋಗಬ್ಯಾಡಪ್ಪಾ. ಶ್ರೀವಲ್ಲಭರಾಯರು ಬರತಾರ ಅಂತ ಪತ್ರ ಬಂದದ ಈಗ. ನೀನs ಎಲ್ಲಾ ಮಾಡಬೇಕು ಮತ್ತ. ಆಚಾರs, ನಿವೂ ಹೋಗಬ್ಯಾಡ್ರಿ ಎಲ್ಲ್ಯ್ಯಾ.

**ಸ** — ಅಂ ! ಶ್ರೀವಲ್ಲಭರಾಯರು ಬರತಾರs! ಇದೇ ಈಗ ಬರತೇನಿ.

[ ಇಬ್ಬರೂ ಹೋಗುವರು ]

— **ಧ** ( ಕನಕರಾಯರಿಗೆ ) ದೊಡ್ಡ ಗೃಹಸ್ಥರು ಕಾಣಸತಾರ ಪಾಪ ! ದೊಡ್ಡ ಮನಸ್ಸಿನವರು ಇದ್ದಾರ. ಹುಡಿಗಿಯನ್ನಂತೂ – ನಾ ನೋಡೀನಿ – ಯಾತರಾಗೂ ತಗದು ಹಾಕೋ ಹಾಂಗಿಲ್ಲ. ಕೊಡಕೊಳ್ಳಿಗೂ ನೆಟ್ಟಗಿದ್ದಾರ ಕಾಣತದ. ಯಾಕ ಮಾಡಿಕೊಂಡುಬಿಡಬಾರದು ? ಯಾಕ್ರಿ ಆಚಾರs ?

**ಚಿ** — ಹೌದು ಎಲ್ಲಾ ಖರೆ. ಆದರ ಶಾಸ್ತ್ರಸಮ್ಮತಿ ಇಲ್ದ ಹ್ಯಾಂಗ ಮಾಡಿಕೋತೀರಿ ? ಪಂಢರಪುರದಾಗ ಹುಟ್ಟಿಬೆಳೆದ ಹುಡಿಗೀ ಅಂತ ನೀವs ಅಂತೀರಿ. ಅಂದಮ್ಯಾಲ ಹ್ಯಾಂಗ ಮಾಡಿಕೋತೀರಿ ?

**ಧ** — ನೀವು ಮಾಡಬೇಕೂ ಅಂದರ ಬೇಕಾದ್ದಕ್ಕ ಆಧಾರ ತಗದು ಕೊಡತೀರಿ. ಹಾಂಗ ಇದಕ್ಕೂ ಒಂದು ಏನಾರ ತಗೀರಲ್ಲ ಆಧಾರ.

ಚಿ — ಇದಕ್ಕ ನಿರಾಧಾರನಽ ಗತಿ, ಬಾಯರ. ಅನುಕೂಲಸಿಂಧು ಬಿಟ್ಟರ, ಬ್ಯಾರೆ ಯಾವ ಧರ್ಮಸಿಂಧುದೊಳಗೂ ಇದಕ್ಕ ಆಧಾರ ಸಿಗೂದಿಲ್ಲ.

ಕ — ( ಅಸವಸೆಯಿಂದ ) ಇರಲಿ, ಅದನ್ನೆಲ್ಲಾ ತಗೊಂಡು ಈಗೇನು ಮಾಡೋದದ ? ಮುಂದಿನ ವ್ಯವಸ್ಥಾ ಏನೇನು ನೋಡೋಣು.

ಢ — ಏನೇನು ಮಾಡಬೇಕು ಹೇಳ್ರಿ ?

ಕ — ಅದನ್ನ ಹೇಳಬೇಕಾಗಿದ್ದರ ನಿಮ್ಮನ್ನ್ಯಾಕ ಕೇಳತಿದ್ದೆ ?

ಚಿ — ಇರಲಿ. ರಾಯರ, ನಾ ಎಲ್ಲಾ ನೋಡಿಕೋತೀನಿ. ನೀವು ಇಂಥಾದ್ದು ಆಗಬೇಕು ಅನ್ನಿರಿ; ಅದು ತಯ್ಯಾರ ಇಡಸತೇನಿ.

ಕ — ಆಗಲಿ, ಹಂಗಾರ ಕೆಲಸಕ್ಕ ಹತ್ತರಿ. ನಾ ಒಂದಿಷ್ಟು ಹೊರಗ ಹೋಗಿ ಬರತೇನಿ. ಸರ್ವೋತ್ತಮನು ಬಂದವ್ಯಾಲ ಪ್ಯಾಟ್ಯಾಗ ಕಳಿಸಿ ಏನ ಬೇಕು ಅದನ್ನ ತರಿಸು.

[ ಹೋಗುವನು ]

ಚಿ — ಬಾಯರ, ಇಂಥ ಅಘಟಿತ ಘಟನಾ ಸಂಭವಿಸಬೇಕೂ ಅಂದರ ಅದು ಭಗವತ್ಸಂಕಲ್ಪನೇ ಹೊರತು ಮತ್ತೊಂದಲ್ಲ.

ಢ — ಹೌದರೆಪ್ಪಾ, ಹೊತ್ತು ಬರೋತನಕ ಕಾಯಬೇಕೂ ಅಂತಾರ ಸುಳ್ಳಲ್ಲ ನೋಡ್ರಿ.

ಚಿ — ಹೌದು, ಹಾಂಗ ಕಾಯ್ದರಽ ಫಲಾ ಸಿಗತದ ಬಾಯರ.

[ ಇಬ್ಬರೂ ಹೋಗುವರು ]

— ತೆರೆ —

## ದೃಶ್ಯ ೨.

[ ತೋಟದ ಹಾದಿ ]

**ಮಾ** — ( ಎದುರಿಗೆ ನೋಡಿ ) ಅಲಾ ಇವನ! ಇಂವ ಇತ್ತಾಕ ಯಾಕ ಬಂದನಪಾ ಅಂತೀನಿ! ತಪ್ಪಿಸಬೇಕೂ ಅಂತ ಏಟ ಮಾಡಿದರೂ ಕಡೀಕ ಎದರಿಗೇ ಬಂದಬಿಟ್ಟನಲ್ಲ! ಇನ್ನೇನು ಮಾಡೂದು? ಏನಾರ ಹೇಳಿದರಾಯಿತು, ಕೇಳಿದರ.

**ಬಿ** — ( ಎದುರಿನಿಂದ ಬಂದು ದೂರ ನಿಂತು ) ಇಂವ ಯಾಕ ಈ ಹಾದಿಗೆ ಬಂದಾನ? ನನ್ನ ಮ್ಯಾಲ ಪಾಳತಿ ಇಟ್ಟಾನೇನು ಮತ್ತ? ಇವನ್ನ ಹ್ಯಾಂಗ ಇಲ್ಲಿಂದ ಬೇಗನೆ ಕಳಿಸೋದು? ಇಲ್ಲಿದ್ದರೆ ನಮ್ಮ ಹೊಂಚೆಲ್ಲ ಹೊಳಿಗೂಡಿ ಹೋಗತದ. ( ಯೋಚಿಸಿ ) ಹಂ, ಕೊಟ್ಟ ರೊಕ್ಕ ತಿರಿಗಿ ಕೇಳಿದರಾಯಿತು. ಶೆಟ್ಟರು ನಿಂತರ ಹೌದಲ್ಲೊ. ಕೇಳ ಕೇಳೋದರಾಗ ಮಾಯ ಆಗಿಬಿಡತಾರ. ( ಮುಂದ ಬಂದು ) ಓಹೊ! ಶೆಟ್ಟರು ಇತ್ತಲಾಗ? ಭೆಟ್ಟಿಯೇ ಇಲ್ಲ ಹತ್ತ ಹದಿನೈದು ದಿವಸ ಆದರೂ!

**ಮಾ** — ( ಉಗುಳು ನುಂಗುತ್ತ ) ಯಾಪಾರ ಕೊಡಾಕ ಅಂತ ದೇಶಾವರಿ ಹೋಗಿದ್ದಿವ್ರಿ. ನಾನೂ ನಿನ್ನೆ ಊರಿಗೆ ಬಂದೇನ್ರಿ.

**ಬಿ** — ಮತ್ತ ನಮ್ಮ ಹಣದ ವ್ಯವಸ್ಥಾ ಏನು ಮಾಡಿದಿರಿ?

**ಮಾ** —( ಗಡಿಬಿಡಿಯಿಂದ ) ಯಾಪಾರ ಕೊಟ್ಟ ಬಂದೇನ್ರಿ. ಎರಡು ದಿವಸದಾಗ ಹಣ ಬರತೈತಿ. ನಿಮ್ಮದು ಪೂರಾ ತಕ್ಕೊಂಡು ಬಿಡ್ರಿ. ಅದಕ್ಕೇನ್ರಿ, ಯಾಪಾರ ಸರಳ ಇರಬೇಕು.

**ಬಿ** — ಶೆಟ್ಟರ, ಸರಳಾ-ಪರಳಾ ನಾ ಇನ್ನ ಕೇಳೋದಿಲ್ಲ. ಲಗೂನ ನಮ್ಮ ಗಂಟು ಕೊಟ್ಟಬಿಡ್ರಿ. ನಾವಿನ್ನು ಈ ಊರು ಬಿಟ್ಟು ಹೋಗೋದು ಬಂದದೆ.

**ಮಾ** — ನಿಮ್ಮ ಅಡ್ರೆಸ್ ಕೊಟ್ಟು ಹೋಗರಿ. ನಿಮ್ಮ ಹಣಕ್ಕ ಬ್ಯಾಂಕಿನ ಹುಂಡಿ ಕಳ್ಸಿಕೊಡತೇನಿ.

**ಬಿ** — ಉಹುಂ. ಅದೆಲ್ಲಾ ಆಗದು. ಹೀಂಗs ಹೇಳಲಿಕ್ಕೆ ಹತ್ತಿ ಎರಡು ತಿಂಗಳ ಮೇಲಾಯಿತು, 'ನಾಲ್ವತ್ತು ಸಾವಿರದ ವ್ಯಾಪಾರ ಕೊಟ್ಟೇನಿ. ಅದ ರಾಗ ಭಾಳ ಫಾಯಿದೆ ಬರತೈತಿ, ನಿಮ್ಮ ಗಂಟು ಕೊಟ್ಟಬಿಡತೇನಿ' ಅಂತ. ಇನ್ನೇನು ಕೇಳೂದಿಲ್ಲ.

**ಮಾ** — ಈಗಂತೂ ಗಂಟು ಕೊಡೋದು ನನ್ನಿಂದಾಗಾಣಿಲ್ಲ (ಮುಂದೆ ಹೊರಡುತ್ತಾನೆ)

**ಬಿ** — (ಅಡ್ಡಗಟ್ಟಿ) ನಾ ಬಿಡೂದಿಲ್ಲ.

**ಮಾ** — ನಾವಾರs ಏನು ಮಾಡೋಣು ? ಗಂಟು ಕೈಗೆ ಬರಬೇಕೋ ಬರಬ್ಯಾಡೋ ?

**ಬಿ** — ಅದೇನs ಇರಲಿ, ಗಂಟು ಕೊಡದ ಹೊರತು ನಾಯೇನು ನಿಮ್ಮನ್ನು ಮುಂದ ಬಿಡೂದಿಲ್ಲ.

**ಮಾ** — (ಮುಂದೆ ನಡೆದು) ಏನು ಮಾಡವರು ನೀವು ?

**ಬಿ** — (ತಡೆದು) ಇಲ್ಲೇ ಹಿಡಿದು ಕೂಡಿಸಿಬಿಡತೇನಿ.

**ಮಾ** — ಹಾಗೆಲ್ಲ ಮಾಡಿದರ ಅಬರೂ ಲುಕ್ಸಾನಿ ದಾವೆ ಮಾಡ ಬೇಕಾದೀತು, ಗೊತ್ತಿರಲಿ. (ಮುಂದೆ ನಡೆಯುವನು)

**ಬಿ** — (ತಡೆಯುವನು)

**ಮಾ** — ಸರಿ ಸರಿ ಅತ್ತಾಕ. (ದಬ್ಬಿ ಹೋಗಬೇಕೆನ್ನುವನು)

[ಸರ್ವೋತ್ತಮ ಬರುವನು]

**ಸ** — ಏನಿದು ? ರಸ್ತೆಯಲ್ಲಿ ಹೀಗೆ ಜಗಳಾಡಿದರೆ ?

**ಮಾ** — ನೋಡಿರಿ, ಇವರು ನನಗ ದಾರೀ ಕಟ್ಟತಾರು.

**ಸ** — ಏನು, ಬಿಚ್ಚುನಾಥರಾವ್, ಏನಿದು ?

**ಬಿ** — ಕೊಟ್ಟ ಹಣ ತಿರಿಗಿ ಕೇಳಿದೆ. ಅಷ್ಟಕ್ಕೆ ಇಷ್ಟು.

**ಮಾ** — ಹೌದರಿ, ಕೊಟ್ಟ ಹಣ ಕೇಳೋದು ರಸ್ತೆದಾಗs ಏನ್ರಿ ? ಹಣ ಕೊಟ್ಟಾರು. ನಾ ಇಲ್ಲ ಅನ್ನೂದಿಲ್ಲ. ತಿರುಗೂ ಕೊಡತೇನಿ. ಆದರ ನಿಂತಕಾಲವ್ಯಾಗs ಕೊಡೂ ಅಂದರ ಹ್ಯಾಗ ? ಯಾಪಾರ ಕೊಟ್ಟೇನಿ. ಬಂದ ಗಳಿಗ್ಗೆ ಕೊಡತೇನಿ ಅಂತ ಹೇಳಿದರ ಕೇಳಬೇಕಲ್ಲ. ಆದನ್ನೆಲ್ಲ ಬಿಟ್ಟು ನೈಕೈ

ಮುಟ್ಯಾಕ ಬಂದರ ಹ್ಯಾಗ? ಅದಕ್ಕಂಡಽ ನಾ ಹೇಳಿದೆ: ನಾನೂ ಮುಳಗಿದೆ, ನೀವೂ ಮುಳಗಿದಿರಿ. "ತನ್ನಂತೆ ಪರರ ಬಗೆದಡೆ ಕೈಲಾಸ ಬಿನ್ನಣವಕ್ಕು. ನಮಗೂ ಕೈಲಾಸ, ನಿಮಗೂ ಕೈಲಾಸ." ಅಂತ.

**ಸ** — ಶೆಟ್ಟರ, ರಸ್ತೇದಾಗ ಕೇಳಿದ್ದು ಆವರದು ಅಲ್ಲಾದರೂ ನೀವು ಹೀಂಗ ಅಂಬೋದು ನಿಮ್ಮ ಶೀಲಕ್ಕ ಸರಿಯಾದ ಮಾತಲ್ಲ. ತಾನಂದರೂ ಒಂದೆ, ಅನ್ಯರಂದರೂ ಒಂದೇ, ತನ್ನಂತೆ ಅನ್ಯರಿಗೂ ಕಲ್ಯಾಣ ಬಯಸ ಬೇಕೆಂಬ ತತ್ವದ ಮಾತು, ನೀವು ಇನ್ನೊಬ್ಬರ ಹಣ ತಂದದ್ದನ್ನ ತಿರಿಗಿ ಕೊಡೋವಾಗ ಹೇಳತೀರಿ. ಹೀಂಗ ವಿಪರೀತ ಅರ್ಥಮಾಡಬಾರದು, ಆ ಮಹಾತ್ಮನ ವಚನಕ್ಕ.

**ಮಾ** — ಇದೆಲ್ಲ ನಮಗ ಗೊತ್ತೈತಿ ಬಿಡ್ರಿ.

**ಬಿ** — ಈ ವೇದಾಂತ ಈ ತತ್ವಜ್ಞಾನ ಯಾತಕ್ರೀ? ನನ್ನ ಹಣ ನಾ ಕೇಳಲಿಕ್ಕೆ ರಸ್ತೆ ಏನು, ಮನಿ ಏನು? ಕೊಡೋ ಮನುಷ್ಯ ಹೀಗೆಲ್ಲಾ ಮಾತಾಡತಾರೇನ್ರೀ? ಮನೆಯಲ್ಲಿ ಕಳ್ಳಗಂಟಿಟ್ಟು ಇದು ಮೇಲಿನ ಸೋಗು.

**ಸ** — ಕ್ಷಮಿಸಿರಿ. ತಮಗೆ ತೊಂದರೆ ಕೊಟ್ಟೆ.

[ ಹೋಗುವನು ]

**ಮಾ** — ಬರತೀರೆನು ಮನಿಮಟ, ನೋಡಿಕೊಣ್ಣಾಕ? ಸುಮ್ಮನ ಮನಿಸಿನ್ಯಾಗ ಮಿಳಮಿಳಿ ಬ್ಯಾಡ.

**ಬಿ** — ಏನ್ ಬ್ಯಾಡಾ. ನಿಮಗ ತಿಳಿದಾಗ ತಂದು ಕೊಡ್ರಿ.

[ ಮಾಚಣ್ಣ ಹೋಗುವನು ]

ಉಶ್! ಏನೋ ಲೆಕ್ಕಾ ಹಾಕಿದರ ಏನೋ ಆಯಿತು. ಅಂತೂ ಹೋದರಲ್ಲ ಎಲ್ಲಾರೂ! ಇನ್ನೊಂದಷ್ಟು ಇದು ಹೀಂಗಽ ನಡೆದಿದ್ದರ ಎಲ್ಲಾ ಕೆಟ್ಟುಹೋಗತಿತ್ತು. ( ಅತ್ತಿತ್ತ ನೋಡಿ ) ಹಂ, ಇನ್ನ ಸಜ್ಜು ಆಗೋಣ. ( ಕಾಲು ಮುರಿದವನಂತೆ ಬಿದ್ದುಕೊಂಡು ) ಹಾ ಹಾ ಹಾ ಕಾಲಽ.... ಹಾ... ಕಾಲಽ .... ಇನ್ನೂ ಬರಲಿಲ್ಲಲ್ಲಾ! ( ದಾರಿಯ ಕಡೆಗೆ ನೋಡಿ ) ಯಾರೋ ಬಂದ್ಹಾಂಗ ಆತು.... ಹಾಂ! ಹಾಂ! ಕಾಲಽ.... ಏ ಅಲ್ಲ, ಅತ್ಲಾಗಽ ಹೋದರು.... ಇವರ್‍ು ಹೋಗಿ, ಹೇಳಿದ ಮ್ಯಾಲ ಬರಬೇಕೂ ಅಂದರ ಸ್ವಲ್ಪ ಹೊತ್ತು ಬೇಕು.

( ಸುತ್ತಲೂ ನೋಡಿ ) ಯಾರೋ ಬರೋ ಸಪ್ಪಳ ಕೇಳಿಸಿತು! ... ಬಂದಳೇನು? .... ಹಾ ಹಾ ಹಾ ! ಅಯ್ಯೋ ! ( ನರಳುವನು )

ಬಿದ್ದ — (ದೂರ ನಿಂತು ನೋಡಿ) ಹೌದಲೆ ಹುಡುಗಾ! ಈ ಪಾಯಾ ಹಾಕೀದೇನು ? ಮಾಡತೀನಿ ನಿನಗ. (ಮುಂದೆ ಬಂದು) ಏನಾಗ್ಯೆತಿ ರಾಯರ? ಏನಾಗ್ಯೆತಿ? ಇಲ್ಲ್ಯಾಕ ಬಿದ್ದೀರಿ ಹೀಗ ?

ಬಿ — (ಮುಖ ಕಿವಚಿ) ಏನು ಮಾಡ್ಲೆಪ್ಪಾ! ಬೈಸಿಕಲ್ ಮೇಲಿಂದ ಬಿದ್ದೆ. ಕಾಲು ಮುರಿದ್ಹಾಂಗ ಕಾಣಸತದ. (ನರಳುವನು)

ಬಿದ್ದ — ಮತ್ತ ಬೈಸಿಕಲ್ಲು ಎಲ್ಲ್ಯೆತ್ರೀ ?

ಬಿ — ಈಗ ಟಾಂಗಾ ತರಲಿಕ್ಕೆ ಒಬ್ಬರು ಒಯ್ದಾರ, ನೀ ಒಂದಿಷ್ಟು ಲಗೂನ ಹೋಗಿ ಡಾಕ್ಟರನ್ನ ಕರಕೊಂಡು ಬರ್ತೀದ್ಯಾ ?

ಬಿದ್ದ ಈಟಕ್ಕೆಲ್ಲ ಎದಕ್ಕರಿ ಡಾಕ್ಟರು? ನಾ ಬರಾಬರಿ ಮಾಡ್ತೇನು. ( ಕಾಲು ಹಿಡಿಯುವನು. ಮುಟ್ಟಿದ ಕೂಡಲೆ ಹೆಚ್ಚೆಚ್ಚು ನರಳುವನು)

ಬಿ — ನೀಯೇನು ಬರಾಬರಿ ಮಾಡತೀದಿ ತಗಿ. ಬ್ಯಾಡ. ಡಾಕ್ಟರನ್ನ ಕರಕೊಂಡು ಬಾ ಹೋಗು.

ಬಿದ್ದ — ಅವರೂ ಬರತಾರ್ರೀ ಈಗ. ಹೊಂಟಾರು, ಬಿದಿರು ಅರಿವಿ ತಗೊಂಡು.

ಬಿ — ಅವು ಯಾತಕ್ಕ ?

ಬಿದ್ದ — ಕಟ್ಟಾಕರಿ.

ಬಿ — ಏನು ?

ಬಿದ್ದ — ಕಾಲರೀ.

ಬಿ — ಟಾಂಗಾ ತರಲಿಕ್ಕೆ ಹೋದವರು ಬಂದರೇನೋ ನೋಡು.

ಬಿದ್ದ — ಈಗ ಬರತಾರೇಳ್ರಿ; ಎಲ್ಲಿ ಹೋಕ್ಕಾರು.

ಬಿ — ಆ ತೋಟದಾಗ ಯಾರಾದರೂ ಇದ್ದಾರೇನು ?

ಬಿದ್ದ — ಹೂಂ, ಇರತಾರ್ರಿ.

ಬಿ — ಒಂದಿಷ್ಟು ಕುಡಿಯೋ ನೀರು ತಗೊಂಡು ಬರ್ತೀಯಾ ? ಭಾಳ ನೀರಡಿಕಿ ಆಗೇದ.

ಬಿದ್ದ — ಈ ಹೊತ್ತಿನಾಗ ಅಲ್ಲಿ ಯಾರೂ ಇರಾಕಿಲ್ರೀ.

ಬಿ — ಮತ್ತೆಲ್ಲಾದರೂ ಹೋಗಿ ತಗೊಂಡು ಬಾ. ಲಗೂ ಹೋಗು.

ಬಿದ್ದ – ( ನೋಡಿ ) ನಾ ಯಾಕ ಹೋಗಬೇಕು; ಆವರತ ಬಂದರು ನೋಡ್ರಿ.

ಬಿ — ಯಾರು ?

ಬಿದ್ದ — ಅಂಜನವ್ವನೋರು.

[ ಅಂಜನಾ ಬರುವಳು ]

ಅಂ ( ಬಂದು ) ಯಾವ ಕಾಲು ಮುರಿದಿದೆ ರಾಯರೆ ?

ಬಿ — ಈ ಕಾಲು. ( ತೋರಿಸುವನು )

ಬಿದ್ದ — ( ಹಿಡಿದು ನೋಡಿ ) ಅಟಟೇನು ಜಖಮ್ ಆಗಿಲ್ಲರಿ.

ಬಿ — ( ಅಂಜನೆಗೆ ) ನೀವು ನೋಡಿರಿ. ಅವನಿಗೇನು ತಿಳಿಯುತ್ತದೆ ಹುಂಬನಿಗೆ.

[ ಐಬ್ರಾಂ ಬರುವನು ]

ಐ — ಏನಾಗಿದೆ? ಯಾವ ಕಾಲಿಗೆ ಪೆಟ್ಟು ತಾಕಿದೆ? ಓ! ಅಂಜನಾದೇವಿ!

[ ಅಂಜನಾ ಹಿಂದೆ ಸರಿಯುವಳು ]

ಬಿದ್ದ — ರಾಯರ, ಡಾಕ್ಟರತ ಬಂದರು ನೋಡ್ರಿ. ಎಲ್ಲಾ ಹೇಳ್ರಿ ಅವರಿಗೆ.

ಐ — ನೋಡುವ. ( ಕಾಲು ನೋಡುವನು )

ಬಿ — (ಕಾಲು ತೋರಿಸಿ) ಇಲ್ಲೆ, ಇಲ್ಲೆ. ಡಾಕ್ಟರ್, ನಿಮಗೆ ಯಾರು ಹೇಳಿದರು ?

ಐ — ( ಕಾಲು ನೋಡುತ್ತ ) ಚೆನ್ನವ್ವ ಹೇಳಿದರು.

ಬಿ — ಅಲ್ಲಿ ಬಹಳ ನೋವು ! ಎಲುವು ಮುರಿದಿರಬೇಕು.

ಐ — ( ನೋಡಿ ) ಎಲುವು ಮುರಿದಿಲ್ಲ. ಏನೂ ಆಗಿಲ್ಲ. ಮನೆಗೆ ಹೋಗಿ ತಣ್ಣೀರಿನ ಪಟ್ಟಿಕಟ್ಟಿರಿ ಸಾಕು. ಅಂಜನಾದೇವಿ, ನೀವು ಹೇಳ ಬಂದಿರಿ ?

ಅಂ — ಯಾರೋ ಬಂದು ಹೇಳಿದರು. ಬಂದೆ.

[ ಶಾಂತಣ್ಣ ಬರುವನು ]

**ಶಾಂ** — ಯವ್ವಾ, ನಾಕೂ ಯಾಳ್ಯಾ ಸವಾ ಇರೂದಿಲ್ಲ. ಹಾಗೆಲ್ಲ ಮನಿ ಬಿಟ್ಟು ಹೊರಟು ಬರಬ್ಯಾಡ ತಾಯಿ! ಕಾಯೋ ದೇವರು ಬ್ಯಾರೆ ಅದಾನು. ಆದರೂ ಎಚ್ಚರಾ ತಗೋ ತಾಯಿ!

**ಬಿದ್ದ** — ರಾಯರ, ನೀರು ಕುಡೀತೀರೇನ್ರಿ? ತಂದು ಕೊಡತೇನ್ರೀ.

**ಬಿ** — (ದುರುಗುಟ್ಟಿ ನೋಡುವನು)

**ಬಿದ್ದ** — ಕಾಲು ಭಾಳು ನೋವು ಆಗೇತೇನೊ. ಕಳಸಾಕ ಬರತೀನ್ರಿ?

**ಬಿ** — ಏನು ಬ್ಯಾಡ.

**ಬಿದ್ದ** — ಟಾಂಗಾ ಬರತೈತಿ ಏನ್ರಿ?

**ಬಿ** — (ಹಲ್ಲು ಕಡಿಯುತ್ತ) ಹೂಂ.

[ಮಾಚಣ್ಣ ಶೆಟ್ಟಿ ಸರ್ವೋತ್ತಮ ಬರುವರು]

**ಮಾ** — (ನೆಟ್ಟಗೆ ಬಿಚ್ಚುನಾಥನ ಹತ್ತಿರ ಹೋಗಿ) ರಾಯರ, ನನ್ನದು ತಪ್ಪಾಗೈತಿ. ಯಾಪಾರದಾಗ ಲುಕ್ಸಾನ ಆಗಿದ್ದೇನೊ ಖರೇವೈತಿ. ಆದರೂ ನಿಮ್ಮ ಇಪ್ಪತ್ತ ಸಾವಿರದಾಗ ಹತ್ತು ಸಾವಿರ ಕೊಡತೇನಿ. ತಗೊಂಡು ವಂಗಿಸಿ ಬಿಡಬೇಕು.

**ಬಿ** — ಅಂ! ಹತ್ತು ಸಾವಿರ ರೂಪಾಯಿ ಈಗ ಕೊಡತೀರಾ?

**ಮಾ** — ಮನೀಗೆ ಬರ್‍ರಿ. ಈಗs ಕೊಡತೇನಿ.

**ಬಿ** — (ಎದ್ದು ನಿಂತು) ನಡೆಯಿರಿ ಹಾಗಾದರೆ.

**ಬಿದ್ದ** — ಕಾಲು ಸವಾ ಆತೇನ್ರಿ ರಾಯರ, ಆಗಾಳೆ?

[ ಬಿದ್ದಾಡಿಯನ್ನು ನೋಡುತ್ತ ಎಲ್ಲರಿಗೂ ಕೈಮುಗಿದು ಮಾಚಣ್ಣ ಶೆಟ್ಟಿಯೊಡನೆ ಹೋಗುವನು ]

**ಸ** — ಅಂತೂ ತಮ್ಮ ನ್ಯಾಯ, ತಾವೇ ಬಗೆಹರಿಸಿಕೊಂಡರು.

**ಐ** — ನಮ್ಮ ಪರಲೋಕದ ತಂದೆಯು ಸಹ ಹಾಗೆಯೆ ಹೇಳುತ್ತಾನೆ: ಕೊಟ್ಟ ಭಾಷೆ ತಪ್ಪಬೇಡ ಎಂದು.

**ಸ** — (ನಗುತ್ತಿರುವ ಅಂಜನೆಯನ್ನು ನೋಡಿ) ಡಾಕ್ಟರಸಾಹೇಬ್, ಇನ್ನು ನಿಮ್ಮ ಆ ಬೈಬಲ್ಲಿನ ಕನ್ನಡ ಭಾಷೆ ಬಿಡಿರಿ.

ಏ — ಸ್ಟೈಬಲ್ಲಿನ ಭಾಷೆಯೊ ಹಾಗಿದೆ.

ಸ — ಅದನ್ನು ತಿದ್ದಿರಿ, ಇಲ್ಲವೆ ತಿದ್ದಿಸಿರಿ.

ಏ — ಇನ್ನು ನಾನು ಬರುತ್ತೇನೆ. ( ನಮಸ್ಕಾರ ಮಾಡಿ ಹೋಗುವನು )

ಸ — ಏನು ಶಾಂತಣ್ಣಾ, ಬಹಳ ದಿನಸಾತು ನಿನ್ನ ಕಂಡೇ ಇಲ್ಲಲ್ಲ ?

ಶಾಂ — ಬರ್ತೀನಿ ಯಪ್ಪಾ. ಜೇಜೇ ಮುಂದ ಅತ್ತಾಗ ಬರ್ತೇನಿ. ಬರ್ತೀನಿ ತಾಯಿ ( ನಮಸ್ಕರಿಸಿ ಬಿದ್ದಾಡಿ ಸಹಿತ ಹೋಗುವನು )

ಸ — ಇದು ನಿಮ್ಮ ವಸ್ತ್ರ. ಅಂದು ನೀವು ಕೊಟ್ಟಿದ್ದು. ( ಕೊಡ ಹೋಗುವನು )

ಅಂ — ನಿಮ್ಮ ಹತ್ತಿರs ಇರಬಹುದಲ್ಲ, ನಮ್ಮ ನೆನಪು ಅಂತ.

ಸ — ಅದು ಬ್ಯಾಡ ಅಂತs ನಿಮಗ ಕೊಡಬೇಕೆಂದಿದ್ದೆ.

ಅಂ — ನಮ್ಮ ನೆನಪೂ ಬ್ಯಾಡs ? !

ಸ — ಹಾಂಗಲ್ಲ ........

ಅಂ — ನಾವಿನ್ನು ಈ ಊರನ್ನು ಬಿಟ್ಟು ಹೋಗುವವರಿದ್ದೇವೆ. ಅದಕ್ಕೆಂದೇ ನಿಮಗೆ ಹಾಗೆ ಹೇಳಿದೆ.

ಸ — ( ಉಸಿರ್ಗರೆದು ) ಆಗಲಿ. ( ವಸ್ತ್ರವನ್ನೇ ದಿಟ್ಟಿಸುತ್ತ ) ದಾರಿ ಗಾಣದ ನನ್ನ ಕಣ್ಣಲ್ಲಿ ಅಂಜನವನ್ನು ಹಾಕಿ ದಾರಿ ತೋರಿಸಿದ ನೆನಪೆಂದು, ನೀವು ನನ್ನಲ್ಲಿ ಹೊತ್ತಿಸಿದ ದೀಪಕ್ಕೆ ಪ್ರತೀಕ ಎಂದು, ಅದಕ್ಕೆ ನನ್ನ ಸ್ನೇಹ ವನ್ನು ಜೊತೆಮಾಡಿ ಇದನ್ನು ಇನ್ನು ಇಟ್ಟುಕೊಳ್ಳುತ್ತೇನೆ.

ಅಂ — ಮತ್ತೆ ಯಾವಾಗ ಭೆಟ್ಟಿ ?

ಸ — ದೈವ ಕೂಡಿಸಿದಾಗ.

[ ಇಬ್ಬರೂ ಹೋಗುವರು ]

— ತೆರೆ —

---

# ದೃಶ್ಯ ೩.

[ ಕನಕರಾಯರ ಮನೆಯ ಪಡಸಾಲೆ ]

[ ಮೊದಲ ಅಂಕದಲ್ಲಿಯಂತೆ. ಕುರ್ಚಿ ಮೇಜು ಸ್ವಲ್ಪ ಬೇರೆ ಬೇರೆ. ಹಾಸಿ ದಿಂಬು ಇಡಲಾಗಿದೆ. ತಾಟದಲ್ಲಿ ಹಣ್ಣು, ಎಲೆ ಅಡಿಕೆ ಹಾಕಿ ಇಡಲಾಗಿದೆ. ಅತ್ತರದಾನಿ, ಗುಲಾಬದಾನಿ, ಹೂವಿನ ಕಲಶ, ಇಡಲಾಗಿದೆ. ನಡುಮನೆಯ ಬಾಗಿಲಿಗೆ ಧವಳಾಬಾಯಿ ಕಾಲಿಗೆ ಕಟ್ಟಿಕೊಂಡು ಕುಳಿತಿದ್ದಾಳೆ. ಚಿನ್ನಮುದ್ದಣ್ಣಾಚಾರ್ಯರು ಒಳಗೆ ಹೋಗಿ ಬಂದು ಸಾಮಾನುಗಳನ್ನು ಇಡುತ್ತಿದ್ದಾರೆ. ಕನಕರಾಯರು ಮೇಲಿಂದ ಮೇಲೆ ಹೊರಗೆ ನೋಡುತ್ತ ಅತ್ತಿಂದಿತ್ತ ತಿರುಗಾಡುತ್ತಿದ್ದಾರೆ. ಸರ್ವೋತ್ತಮ ಕುರ್ಚಿ ಟೇಬಲ್ಲು ಸರಿ ಮಾಡುತ್ತಿರುತ್ತಾನೆ. ಎಲ್ಲರೂ ಶ್ರೀವಲ್ಲಭರಾಯರ ಆಗಮನದ ಪ್ರತೀಕ್ಷೆಯಲ್ಲಿರುವರು.]

**ಧ** — ( ಕುಳಿತಲ್ಲಿಂದ ) ಸರೂ, ಎಷ್ಟು ಹೊಡಿಯಿತಪ್ಪಾ ? ಶ್ರೀವಲ್ಲಭರಾಯರು ಬರೋ ಹೊತ್ತಾತೇನು ?

**ಸ** — ( ಕೈಗಡಿಯಾರವನ್ನು ನೋಡಿ ) ಆಗಲಿಕ್ಕೆ ಬಂದಿದೆ. ಈಗ ಬರಬಹುದು. ( ಇಟ್ಟ ಸಾಮಾನುಗಳನ್ನು ಸರಿಮಾಡುವನು )

**ಕ** — ಕಾರಿನಿಂದ ಬರುವವರು, ತಡವಾಗಬಾರದು ಮತ್ತೆ.

**ಚಿ** — (ಎಲಡಿಕೆ ತಾಟು ತಂದಿಡುತ್ತ) ಕಾರಿಂದಾದರೂ ಏನು ನೆಚ್ಚಿಗೀದ, ರಾಯರೆ. ತುಸು ಹೆಚ್ಚು ಕಡಿಮಿ, ಈಗ ಬರಬಹುದು.

**ಧ** — ಆಚಾರ್ರs, ಎಲ್ಲಾ ತಯಾರು ಮಾಡಿಕೊಂಡೀರಾ ? ಇದs ಹೊತ್ತಿನಾಗs ಈ ಕಾಲೊಂದು ಹೀಂಗ ಆಗಿ ಕೂಡಬೇಕs ? ಕೂತಲ್ಲೆ ಕೂಡಬೇಕಾತು ! ಆಚಾರ್ರs, ನಮ್ಮ ನಿರ್ಮಲಕ್ಕನ ಮಾರಿ ಯಾವಾಗ ಕಂಡೇನೋ ಅಂತ ಆಗೇದ.

**ಚಿ** — ಬರತಾರ, ಬರತಾರ. ಬಂದೇ ಬರತಾರ. ನಾವು ಆತರು ಪಟ್ಟರ ಅವರೊಂದು ಬರಬೇಕಲ್ಲ ? ಬರೋ ಹೊತ್ತಿಗೇ ಬರತಾರ.

**ಸ** — ನಾನು ನೋಡಿಯಾದರೂ ಬರತೇನಿ ಹೊರಗ ಹೋಗಿ ( ಹೋಗುವನು )

ಕ — ಬಹಳ ಆತುರದಿಂದ ಹಾದೀ ನೋಡಲಿಕ್ಕೆ ಹತ್ತಿದರ ಹೀಂಗs ಆಗೋದs. ( ಅತ್ತಿತ್ತ ಅಡ್ಡಾಡುತ್ತ, ಹೊರಗೆ ನೋಡುತ್ತ ) ಆಚಾರ, ಎಲ್ಲಾ ತಯಾರ ಅದನೋ ಇಲ್ಲೋ ?

ಧ — ಎಲ್ಲಾ ತಯಾರ ಅದ. ಬೆಳ್ಳೀ ತಾಟಿನಾಗ ಬಾಳಿಹಣ್ಣು-ದ್ರಾಕ್ಷಿ ಇಟ್ಟsನ. ಕೇಶರ ಹಾಕಿ ಹಾಲು ಕಾಸಿ ಇಟ್ಟsದ. ಎಲಿ ಅಡಿಕಿ ಇಟ್ಟsದ. ಅತ್ತರದಾನಿ ಗುಲಾಬದಾನಿ ತೆಗೆದ ಇಟ್ಟsನ. ಉದಿನಕಡ್ಡಿ ಹಚ್ಚಿ ಇಟ್ಟsದ. ಒಳಗ ಅಡಿಗಿಅಂತೂ ತಯಾರ ಅದ. ಕೈಕಾಲು ತೊಳಕೊಳ್ಳಿಕ್ಕೆ ಬಿಸಿನೀರು ಸಹಿತ ತಯಾರ ಅದ.

ಚಿ — ಒರಸಿಕೊಳ್ಳಿಕ್ಕೆ ವಂಜಿ ?

ಧ — ಅದೂ ಅದ.

[ ಮೋಟರ ಹಾರ್ನಿನ ಸಪ್ಪಳ ]

ಅಕಾ ! ಬಂತು ಕಾಣಸತದ.

ಸ — ( ಅವಸರದಿಂದ ಬಂದು ) ಅವ್ವಾ, ಕಾರು ಬಂತು! ಬಂದರು.

[ ಶ್ರೀವಲ್ಲಭರಾಯರು ಮಲ್ಲಿನಾಥರಾಯರು ಬರುವರು ]

ಶ್ರೀ —(ಬಂದು ಕನಕರಾಯರಿಗೆ, ಧವಳಾಬಾಯಿಗೆ ನಮಸ್ಕರಿಸಿ ಕುರ್ಚಿಯ ಮೇಲೆ ಕುಳಿತುಕೊಳ್ಳುವರು )

ಸ — ( ಮಿಕಿಮಿಕಿ ನೋಡಿ ತನ್ನಲ್ಲಿ ) ಮಲ್ಲಿನಾಥರಾಯರ ಹೋಲಿಕೆ ಇದೆ ಇವರಿಗೆ! ಗಡ್ಡ ಮೀಸೆ ಇಲ್ಲ. ಒಬ್ಬರಂತೊಬ್ಬರು ಏಕೆ ಇರಬಾರದು?

ಕ — ಎಲ್ಲಾ ಕ್ಷೇಮs ? ಈಗ ಯಾವ ಊರಿಂದ ಬಂದಿರಿ? ನೀರಡಿಕಿರಬೇಕು. ಸ್ವಲ್ಪ ಪಾನಕ ತಗೊಳ್ಳಿರಿ. ( ಸರ್ವೋತ್ತಮ ಕೊಡುವನು ) ಇಷ್ಟು ದಿವಸ ಎಲ್ಲಿದ್ದಿರಿ ? ನಿಮ್ಮ ಬಿಡುಗಡೆ ಆದ ಮ್ಯಾಲೂ ಯಾವ ಸುದ್ದೀನೂ ಬರಲಿಲ್ಲ.

ಧ — ನಿರ್ಮಲಾ ಎಲ್ಲಿದ್ದಾಳ? ಆಕಿನ್ನ ಯಾಕ ಕರಕೊಂಡು ಬರಲಿಲ್ಲ? ಇಷ್ಟು ದಿವಸದಾಗ ಒಂದು ಪತ್ರ ಹಾಕಿದ್ದರ ಆಗತಿತ್ತು.

ಶ್ರೀ — ( ದುಃಖವನ್ನು ತಡೆಹಿಡಿಯುತ್ತ ) ನನಗ ಶಿಕ್ಷಾ ಆದ ಮ್ಯಾಲ ವಿಸಾಪೂರ ಸೆರೆಮನೆಯೊಳಗೆ ಒಯ್ದು ನಮ್ಮನ್ನಿಟ್ಟರು. ಅಲ್ಲಿ ಹೋದ

ನಾಲ್ಕೈದು ತಿಂಗಳವನ್ಯಾಲ ನನಗ ನಿರ್ಮಲೆಯಿಂದ ಒಂದು ಪತ್ರ ಬಂತು. ಇದೇ ಆ ಪತ್ರ. ( ತೆಗೆದು ಕನಕರಾಯನ ಕೈಯಲ್ಲಿ ಕೊಡುವನು )

ಕ —(ಒಡೆದು, ಕನ್ನಡಕ ಹುಡುಕಾಡಿ)ಪರ್ರೋಕತ್ತನಾ ನನಗ, ಕಾಣಾಕ್ಕ ದಿಲ್ಲ ಚಾಳೀಸ ಇಲ್ಲದ. ನೀನs ಓದು :

ಸ — ( ತೆಗೆದುಕೊಂಡು ಓದಹತ್ತುವನು )

“ ಪ್ರಿಯ ನಾಥರೆ,

ನೀವು ಸೆರೆಮನೆಗೆ ಹೊದ ಬಳಿಕ ನಾನು ತವರುಮನೆಯಲ್ಲಿಯೇ ಬಂದು ಇದ್ದೆನು. ಆಗ ನನ್ನನ್ನು ಮನೆಯಲ್ಲಿಟ್ಟುಕೊಂಡದ್ದಕ್ಕೆ ಸರಕಾರದವ ರಿಂದ ತಂದೆಯವರಿಗೆ ತೊಂದರೆಯಾಗಹತ್ತಿತು. ನೌಕರಿಯನ್ನು ಕಸಿದು ಕೊಳ್ಳುತ್ತೇವೆಂದು ಸರಕಾರದವರು ಬೆದರಿಸಿ ಬರೆದರಂತೆ. ತಂದೆಯವರು ಸರಕಾರದ ಕಿರಿಕಿರಿಯನ್ನು ತಡೆಯಲಾರದೆ ಮನೆಯಲ್ಲಿ ಬಂದು ಹರಿಹಾಯ ಹತ್ತಿದರು. ನನ್ನಿಂದ ಇವರಿಗೇಕೆ ಕಷ್ಟ ಎಂದು ಹೇಳದೆ ಕೇಳದೆ ಹೊರಟು ಇಲ್ಲಿಗೆ ಬಂದಿದ್ದೇನೆ. ಇಲ್ಲಿ ಧರ್ಮಶಾಲೆಯಲ್ಲಿ ಎರಡು ದಿನ ಇದ್ದೆ. ನನಗೆ ದಿನ ಗಳು ತುಂಬಿವೆ. ಬಾಣಂತಿತನ ಎಲ್ಲಿ ಮಾಡಿಸಿಕೊಳ್ಳಬೇಕೆಂಬ ಚಿಂತೆಯ ಲ್ಲಿದ್ದಾಗ ಒಬ್ಬ ಹೆಣ್ಣುಮಗಳು ನನ್ನನ್ನು ಅನಾಥಬಾಲಿಕಾಶ್ರಮಕ್ಕೆ ಒಯ್ದು ಅಲ್ಲಿಯ ಅಧಿಕಾರಸ್ಥರಿಗೆ ಪರಿಚಯಮಾಡಿಕೊಟ್ಟು ಉಪಕಾರ ಮಾಡಿದರು. ಆಶ್ರಮ ದವರು ನನ್ನನ್ನು ತಮ್ಮಲ್ಲಿಟ್ಟುಕೊಂಡು ಎಲ್ಲ ಉಪಚಾರ ಮಾಡುವೆವೆಂದು ಹೇಳಿದ್ದಾರೆ. ನಾನು ಈಗ ಇಲ್ಲಿಯೇ ಇದ್ದೇನೆ. ನಿಮ್ಮ ವಿಳಾಸವನ್ನೂ ನನ್ನ ವಿಳಾಸವನ್ನೂ ಅವರಿಗೆ ಕೊಟ್ಟಿದ್ದೇನೆ. ಮತ್ತೆ ಬರೆಯುತ್ತೇನೆ. ನೀವು ಸುಮ್ಮನೆ ಮನಸ್ಸಿಗೆ ಹಚ್ಚಿಕೊಳ್ಳಬಾರದು. ಮತ್ತು ನಮ್ಮ ಮನೆಯವರ ಮೇಲೆ ಸಿಟ್ಟಿಗೇಳ ಬಾರದು.

ಪ್ರೀತಿ ಇರಲಿ.

ನಿಮ್ಮ
ನಿರ್ಮಲಾ.

ಧ — ನಿರ್ಮಲಾ......

ಶ್ರೀ — ಅದು ಬಂದ ಮೂರು ದಿವಸಗಳ ನಂತರ ಆಶ್ರಮದಿಂದ ಈ ಪತ್ರ ಬಂತು. ( ಇನ್ನೊಂದನ್ನು ತೆಗೆದು ಕೊಡುವನು)

ಸ — ( ತೆಗೆದುಕೊಂಡು ಅದನ್ನು ಓದುವನು )

Dear sir,

You know your wife was here. She gave birth to a female child. But she expired as she could not bear the pangs and consequences of delivery Though we tried our best we could not save her. The child will be cared for. You need not feel anxiety. After your release from jail you should come over here and take care of the child. We are sorry for what has happened.

Secretry

PANDHARPUR. ANATHABALIKASHRAM

ಢ — ಏನು ಬರದಾದ ? ........ನನಗೊಂದಿಷ್ಟು ಹೇಳಿರಿ.

[ ಎಲ್ಲರೂ ಸುಮ್ಮನಿರುವರು ]

ಸುಮ್ಮನ್ಯಾಕಿದ್ದೀರಿ ? .... ಸರೂ, .... ಸರೂ..... ಪತ್ರದಾಗ ಏನ ಬರದದ ನನಗೊಂದಿಷ್ಟು ಹೇಳಪ್ಪಾ !

ಸ — ( ಅತಿದುಃಖದಿಂದ ) ಅಕ್ಕ ಒಂದು ಹೆಣ್ಣುಕೂಸು ಹಡೆದು ಪಂಢರಪುರದ ಆಶ್ರಮದಾಗ ತೀರಿಕೊಂಡಳಂತ....

ಢ — ಅಂ ! ನಿರ್ಮಲಾ ! ನಿರ್ಮಲಾ ! ( ಅಳುವಳು )

ಸ — ತಡಕೋ ಅವ್ವಾ ! ಕೂಸು ಆದ ಅಂತ. ಅವರೇ ಜೋಪಾನ ಮಾಡತಾರಂತ. ಶ್ರೀವಲ್ಲಭರಾಯರು ಬಿಟ್ಟು ಬಂದ ಮ್ಯಾಲ ಬೇಕಂದರ ಕೊಡತಾರಂತ.

ಢ — ನಮ್ಮ ನಿರ್ಮಲಾ ಹೋಗಿಬಿಟ್ಟಳಲ ! ( ಬಿಕ್ಕುತ್ತ ) ಯಾರೂ ದಿಕ್ಕಿಲ್ಲದೆ ಸಾಯೋ ಹೊತ್ತು ಬಂತಲ ನನ್ನ ಕಂದವ್ವಗ ! ನಮ್ಮವ್ವಾ, ಎಷ್ಟು ಕಷ್ಟಪಟ್ಟಿದ್ದೀಯೆ !

ಕ — ಆದದ್ದಾಗಿ ಹೋಯಿತು. ಇನ್ನ ಪಶ್ಚಾತ್ತಾಪದಿಂದ ಅಳೋದರ ಕಿಂತ ನಮ್ಮ ಪಾಲಿಗೆ ಹೆಚ್ಚಿನದೇನು ಉಳದದ ? ನನ್ನಿಂದ ಆಗಬಾರದ ತಪ್ಪು

ಆಗಿಹೋಯಿತು. ಇನ್ನ ಏನು ಮಾಡಿದರೂ ತಿರಿಗಿ ಬರೋಹಾಂಗಿಲ್ಲ ಇನ್ನ ನಮಗ ಉಳದದ್ದೂ ಅಂದರ ಈ ಕರಗಲಾರದ ದುಃಖದ ಗಂಟು. ನನ್ನ ಮಗಳ ಮರಣಕ್ಕ ನಾನಽ ಕಾರಣ ಆಗಬೇಕೂ ಅಂದರ ಏನು ನನ್ನ ದುರ್ದೈವ! ನಾನು ಮಾಡಿದ ಈ ಪಾಪಕ್ಕ ಇನ್ನೇನು ಗತಿ! (ತಲೆಹಿಡಿದುಕೊಂಡು ಹಿಂದಕ್ಕೊರಗುವನು)

ಚಿ — ಬಾಯರ, ರಾಯರ, ದೇವರ ಇಚ್ಛಾಕ್ಕ ಯಾರೇನು ಮಾಡೋದು? ಕರ್ಮಫಲಾ ಅದು. ಉಂಡಽ ತೀರಬೇಕು. ಈಗ ದುಃಖಿಸಿ ಉಪಯೋಗ ಏನು? ಸತ್ತಾಕಿ ತಿರಿಗಿ ಬ್ಯಾರೆ ಬರೂದಿಲ್ಲ? ಇನ್ನ, ಮುಂದಿಂದು ವಿಚಾರಮಾಡಿರಿ. ಸುಮ್ಮನ ಅತಗೋತ ಕೂತರ ಯಾತಕ್ಕ ಬಂತು? ಆ ಕೂಸು ಎಲ್ಲಿ ಅದ ಕೇಳಿಕೊಳ್ಳಿರಿ. ಅದನ್ನ ಕರಕೊಂಡು ಬರ್ರಿ. ಆದರ ಮಾರಿ ನೋಡಿ ನಿಮ್ಮ ದುಃಖ ಮರೀರಿ. (ಶ್ರೀವಲ್ಲಭರಾಯರಿಗೆ) ರಾಯರ, ಕೂಸು ಎಲ್ಲಿ ಅದ?

ಶ್ರೀ — ಆ ಕೂಸು ಈಗ ಬೆಳೆದು ದೊಡ್ಡದಾಗೇದ.

ಢ — ಇಲ್ಲಿಗ್ಯಾಕ ಆಕಿನ್ನ ಕರಕೊಂಡು ಬರಲಿಲ್ಲ ನಿಮ್ಮ ಸಂಗ್ತೀಲೆ? ಆಕಿನ್ನಾರೆ ನೋಡಿ ಮಗಳ ದುಃಖನುಂಗಿ ಕೋತಿದ್ದೆ.

ಶ್ರೀ — ಕರಕೊಂಡೆಲ್ಲಾ ಬರತಿದ್ದೆ. ಆದರ ಆಶ್ರಮದಾಗ ಬೆಳೆದ ಹುಡಿಗಿ. ನೀವು ಮಡಿ ಮಂದಿ. ಬಗೀಹರೀತದೋ ಇಲ್ಲೋ ಅಂತ ಬಿಟ್ಟು ಬಂದೆ.

ಢ — ನೀವೂ ಒಂದು. ಎಲ್ಲಿ ಹುಟ್ಟಿ ಬೆಳವರೇನು, ನಮ್ಮ ಹುಡಿಗಿ ಸುಳ್ಳು ಆಗತದೇನು?

ಚಿ — ಖರೆ. ಆಶ್ರಮದಾಗ ಬೆಳದಾಕ್ಷಣಕ್ಕ ಏನಾಯಿತು? ನಮ್ಮ ವಸ್ತು ಎಂದಿಗೂ ನಮ್ಮದಽ.

ಢ — ನೀವು ಕರಕೊಂಡು ಬರಬೇಕಾಗಿತ್ತು.

ಶ್ರೀ — ನೀವು ಕರಕೊಂಡು ಬಾ ಅಂದರ ಕರಕೊಂಡು ಬರತೇನಿ.

ಢ — ಅಗತ್ಯ ಕರಕೊಂಡು ಬರ್ರಿ, ಇಟಗೋತೇವಿ. ಇಷ್ಟಽ ಯಾಕ, ನಮ್ಮ ಸರೂಗ ಮದಿವಿ ಮಾಡಿಕೊಂಡುಬಿಡತೇವಿ, ಇನ್ನೂ ಮದಿವಿ ಆಗಿರದಿದ್ದರ.

ಚಿ — ಬರಾಬ್ಬರಿ ಮಾತು. ಈಗ ಎಲ್ಲಾ ಸರಿ ಆತ್ಯು.

ಕ — ಶ್ರೀವಲ್ಲಭರಾಯರ, ನನ್ನ ಮನಸ್ಸಿನ ಸಮಾಧಾನಕ್ಕಾದರೂ ಆ ಹುಡಿಗಿನ್ನ ಸರ್ವೋತ್ತಮಗ ತಗೊಂಡು ಬಿಡಬೇಕು ಅಂತೇನಿ.

ಶ್ರೀ — ಅಗತ್ಯ ಆಗಬಹುದು. ಇದಕ್ಕ ಸರ್ವೋತ್ತಮರಾಯರ ಒಪ್ಪಿಗಿ ಆದ ಹೌಗಲ್ಲೊ ?

ಸ — (ತನ್ನಷ್ಟಕ್ಕೆ) ಈಗ ಹ್ಯಾಂಗ ಮಾಡಲಿ ? ಹುಂ ಅಂದರೆ ಅಂಜನೆಯ ಗತಿ ಏನು ? (ಶ್ರೀವಲ್ಲಭರಾಯರಿಗೆ) ಈಗೇಕ ಯಾಕ ಆ ಮಾತು ?

ಥ — ಅತನ್ನೇನು ಕೇಳತೀರಿ ? ಹುಡಿಗಿನ್ನ ಕರಕೊಂಡಂತೂ ಬರ್ರಿ.

ಶ್ರೀ — ಕರಕೊಂಡುಬರಲೇ ? (ಏಳುವನು)

ಥ — ಇನ್ನ ಯಾವಾಗ ಬರೋವರು ?

ಶ್ರೀ — ಈಗ. ಇಲ್ಲೇ ಕಾರಿನಲ್ಲಿದ್ದಾಳೆ.

[ಹೊಗುವರು]

ಥ — ಇಲ್ಲೇ ಬಂದಾಳೇ ! ನೆಟ್ಟಗಾತು. ಮೊಮ್ಮಗಳನ್ನ ನೋಡಿದರ ಮಗಳ ದುಃಖ ಮರೀಲಿಕ್ಕೆ ಆದೀತು.

[ಶ್ರೀವಲ್ಲಭರಾಯರು ಅಂಜನೆಯನ್ನು ಕರಕೊಂಡು ಬರುವರು]

ಅಯ್ಯ ! ಅಂಜನಾಬಾಯಿ ! ಇಕೀನೇ ನನ್ನ ನಿರ್ಮಲಾನ ಮಗಳೇ ? ಅಯ್ ನಮ್ಮವ್ವಾ ! ಎಷ್ಟು ದಿನಸ ಮುಚಿಗೊಂಡು ಕೂತಿದ್ದೇ ! ಬಾ ನಮ್ಮವ್ವಾ, ಬಾ. (ಅಂಜನೆಯನ್ನು ಅಪ್ಪಿಕೊಳ್ಳುವಳು)

ಕ — ಏಽ ! ಅಂಜನಾಬಾಯಿ !

ಸ — ಅಂಜನಾ !

ಶ್ರೀ — ಅಂಜನಾ, ನಿನಗೂ ಆಶ್ಚರ್ಯ ಆಗಿರಬಹುದು. ಒಂದು ಉದ್ದೇಶದಿಂದ ನಿನಗೆ ತಿಳಿಸಿರಲಿಲ್ಲ. ಈಗ ತಿಳಿಸುತ್ತೇನೆ : ಈ ಮಲ್ಲಿನಾಥನೆ ನಿನ್ನ ತಂದೆ.

ಸ — (ಭಾರ ಇಳಿದವರಂತೆ ಉಸಿರು ಬಿಟ್ಟು) ದೇವರೇ ಪಾರು ಮಾಡಿದ !

**[ ತೆರೆಯಲ್ಲಿ ]**

**ಬಿದ್ದ — ಯಾರದೀರಿ ಮನ್ಯಾಗ ?**

**ಸ — ಯಾರವರು ?**

**ಬಿದ್ದ** — ನಾನ್ರಿ. ಬಿದ್ದಾಡಿ.

**ಸ** — ಯಾಕ ಬಂದಿ? ಏನು ಕೆಲಸ? ಒಳಗೆ ಬಾ. (ಅತ್ತ ಹೋಗುವನು)

[ ಬಿದ್ದಾಡಿ, ಚೆನ್ನಿ ಬರುವರು ]

**ಬಿದ್ದ** — ಅಂಜನಪ್ಪನೋರು ಇನ್ನೇನಾರ ಬಂದಾರೇನೋ ಅಂತ ನೋಡಾಕ ಬಂದಿದ್ದಿವಿರಿ. ಮುನಿ ಸದಾ ಹಾರಿಕ್ರಿ. ಊರಾಗೂ ಒಂದೀಟು ಧುಫಳಿ ಭಾಳಾಗೈತಿ. ಅದಕ್ಕಂಡs ಹುಡಿಕ್ಕೊಂತ ಬಂದಿವಿ. ಅದಾರೇನ್ರಿ?

**ಶ್ರೀ** — (ಬಿದ್ದಾಡಿಗೆ) ಇಲ್ಲೆ ಇದ್ದಾರ ಬಾ.

**ಚೆ** — (ನೋಡಿ) ಇಲ್ಲೇ ಅದಾರು! (ಧವಳಾಬಾಯಿ ಹತ್ತರ ಹೋಗಿ) ಯವ್ವಾ, ಈ ನಮ್ಮ ಅಂಜನಪ್ಪನೋರ್ನ ನಿಮ್ಮ ರಾಯರಿಗೆ ಯಾಕ ತಗೋಬಾರದರಿ?

**ಕ** — (ನಗುತ್ತ) ಚೆನ್ನವ್ವ, ತಗೊಂಡsಬಿಟ್ಟೆದ. ಆತಿಲ್ಲ?

**ಚಿ** — ಹೀಂಗ ಆಕಲ್ಪಿತ ಕೂಡಿದ ಯೋಗಾಯೋಗನೆ ಶುಭ ಮುಹೂರ್ತ ಇದ್ದಾಂಗ. ನಿಶ್ಚಯ ಮಾಡಿಬಿಡ್ರಿ.

**ಕ** — ಓಹೋ.

**ಚಿ** — ಪುರ್ವೋತ್ತಮರಾಯಾ, ಇತ್ತಲಾಗ ಬಾ. (ಕೈಹಿಡಿದು ನಿಲ್ಲಿಸುವನು) ಅಂಜನಾಬಾಯಿ ನೀ ಇತ್ತಲಾಗ ಬಂದು ನಿಂದ್ರವಾ.

**ಅಂ** — ಸ್ವಲ್ಪ ತಡೀರಿ. ಆ ಬಿದ್ದಾಡೆಪ್ಪ, ಚೆನ್ನಿ ಅವರನ್ನೂ ಹೀಂಗ ನಿಂದರಸಿರಿ. ನನಗ ಅವರು ಮಾತು ಕೊಟ್ಟಾರು.

**ಚೆ** — ಹೋಗs ಯವ್ವಾ,

**ಬಿದ್ದ** — ಏs, ಸುಮ್ಮಾಕ ಬಾ.

[ ಶ್ರೀವಲ್ಲಭರಾಯರು ತಂದು ನಿಲ್ಲಿಸುವರು ]

**[ ತೆರೆಯಲ್ಲಿ ]**

**ಶಾಂ** — ಯಪ್ಪಾ, ಆದೀರೇನ್ರಿ ಮನ್ಯಾಗ?

**ಸ** — ಇದ್ದೇವಿ. ಬಾ ಶಾಂತಣ್ಣ. ಒಳಗೆ ಬಾ.

**ಶಾಂ** — ದೊಡ್ಡರಾಯರು ಅದಾರೇನ್ರಿ? ಬಂದರ ಸಿಟ್ಟು ಮಾಡ್ತಾರು ಧಣೀ.

**ಕ** — ಒಳಗ ಬಾರೋ, ಏನಗ ಅಡ್ಡಿಯಿಲ್ಲ.

[ ಶಾಂತಣ್ಣ ಬಂದು ದೂರ ನಿಲ್ಲುವನು ]

**ಶಾಂ** — ಇದೇನ್ರಿ? ಜೋಡಿಜೋಡಿ ಆಗಿ ನಿಂತಾರ ಇವರು!

**ಚಿ** — ಇನ್ನಮ್ಯಾಲ ಜೋಡಿ ಆಗವರಂತನ ಹಾಂಗ ನಿಂತಾರ ಶಾಂತಣ್ಣಾ.

**ಶಾಂ** — ಹೂಂ, ಹೀಗೇನ್ರಿ? ಪಾಡಾತು. ಬಾಳ ಸಂತೋಸ! ಇಬ್ಬರಿಗೂ ಕಲ್ಯಾಣ ಆಗಲಿ!

**ಸ** — ಶಾಂತಣ್ಣಾ, ನೀ ಹಿಂದಕ್ಕ ಆಡಿದ ಮಾತನ ಖರೇ ಆತು ನೋಡು.

**ಶಾಂ** — ಎಲ್ಲಾ ದೇವರಾಟ, ನನ್ನ ಧಣಿ! ಆತ ಮಾಡಸಾವ. ನಾವು ಏಟರವರು!

**ಶ್ರೀ** — ನಿನ್ನ ಮಗ – ಡಾಕ್ಟರು ಏನಂತಾರ?

**ಶಾಂ**— ಆ ಮೀಸೀನರಿ ಡಾಕ್ಟರಕಿ ಬಿಟ್ಟು ಈಗ ಬ್ಯಾರೇನ ತಂದೊಂದು ವೈದ್ಯಕಿ ಅಂಗಡಿ ತಗದಾನ್ರಿ.

**ಸ** — ಪಾಡಾತು ನೋಡು.

**ಚಿ** — ( ಆಶೀರ್ವಾದ ಪರ ಮಂತ್ರೋಚ್ಚಾರ ಮಾಡುವರು ) ಇನ್ನೇನ.

**ಸ** — ನನ್ನದೊಂದು ಪ್ರಾರ್ಥನೆ ಅದ :

ಏಳಲಿ ಬಿದ್ದಿಹ ಜನಗಳು
ಹೂಳಲಿ ಸಿಟ್ಟುಸೊಕ್ಕು ಒಳಗೊಳ ಕಿಚ್ಚಂ
ತಾಳಲಿ ಬಂದೆಡರುಗಳಂ
ಬಾಳಲಿ ಎಲ್ಲರಣ್ಣತಮ್ಮಂದಿರವೋಲ್

— ತೆರೆ —

**ಸಮಾಪ್ತ**

# ಮನೋಹರ ಗ್ರಂಥಮಾಲೆ, ಧಾರವಾಡ

ಈ ಗ್ರಂಥಮಾಲೆಯು **೧೯೩೩ನೆಯ ಅಗಸ್ಟಕ್ಕೆ** ಪ್ರಾರಂಭವಾಗಿದೆ. ಕಾದಂಬರಿ, ಸಣ್ಣಕತೆ, ನಾಟಕ ಏಕಾಂಕ, ಹರಟೆ, ದಿನಚರಿ ಮೊದಲಾದ ಸರಸಸಾಹಿತ್ಯವನ್ನೇ ಈ ಗ್ರಂಥಮಾಲೆಯು ಪ್ರಕಟಿಸುತ್ತದೆ.

ಕಾವ್ಯ-ವಿಮರ್ಶೆ-ವಿಜ್ಞಾನ-ವಿಚಾರ ಸಾಹಿತ್ಯವನ್ನೂ ಗ್ರಂಥಮಾಲೆಯು **ಬಿಡಿಮುತ್ತುಗಳೆಂದು** ಆಗೀಗ ಪ್ರಕಟಿಸುತ್ತದೆ.

ಶ್ರೀಯುತರಾದ ದ. ರಾ. ಬೇಂದ್ರೆ, ವಿ. ಕೃ. ಗೋಕಾಕ, ರಂ. ಶ್ರೀ. ಮುಗಳಿ ಇವರು ಈ ಗ್ರಂಥಮಾಲೆಗೆ ಪ್ರಾರಂಭದಿಂದಲೂ ಸಾಹಿತ್ಯವಿಷಯದಲ್ಲಿ ಸಲಹೆಗಾರರಾಗಿ ಮಾರ್ಗದರ್ಶನ ಮಾಡುತ್ತಿದ್ದಾರೆ.

ಇಡಿ ಕನ್ನಡ ನಾಡಿನ ಸಿದ್ಧಹಸ್ತಬರೆಹಗಾರರೂ ಈ ಗ್ರಂಥಮಾಲೆಗಾಗಿ ಗ್ರಂಥಗಳನ್ನು ಬರೆದುಕೊಟ್ಟು ಇದರ ಗೌರವವನ್ನೂ ಕೀರ್ತಿಯನ್ನೂ ಹೆಚ್ಚಿಸಿದ್ದಾರೆ; ಇದರ ಸಾಹಿತ್ಯಸ್ಥಾನವನ್ನು ಉನ್ನತವಾಗಿಸಿದ್ದಾರೆ.

ಗ್ರಂಥಮಾಲೆಯ ಹೊಸ ವರ್ಷವು **ಅಗಸ್ಟ** ತಿಂಗಳಿಂದ ಪ್ರಾರಂಭವಾಗುತ್ತದೆ; ಜುಲೈ ತಿಂಗಳಿಗೆ ಮುಗಿಯುತ್ತದೆ.

ವರ್ಷದಲ್ಲಿ ಯಾವಾಗ ಬೇಕಾದರೂ ಈ ಗ್ರಂಥಮಾಲೆಗೆ ಹೊಸದಾಗಿ ಚಂದಾದಾರರಾಗಬಹುದು. ಆ ಹಿಂದೆ ಪ್ರಕಟವಾದ ಆ ವರ್ಷದ ಗ್ರಂಥಗಳನ್ನು ಅವರಿಗೆ ಅಗಸ್ಟದಿಂದಲೆ ಹೊಸಗ್ರಾಹಕರೆಂದು ಭಾವಿಸಿ ಸಲ್ಲಿಸಲಾಗುವದು.

ಚಂದಾ ಹಣವನ್ನು ಮುಂಗಡವಾಗಿ ಕೆಳಗೆ ಕಾಣಿಸಿದ ವಿಳಾಸಕ್ಕೆ ಮನಿಯಾರ್ಡರ ಮೂಲಕ ಕಳುಹಿಸಿಕೊಡಬೇಕು.

ಗ್ರಂಥಮಾಲೆಯು ನಡೆಯುವ ವರ್ಷದ ಗ್ರಂಥಗಳನ್ನು ಬಿಟ್ಟು ಹಿಂದಿನ ಗ್ರಂಥಗಳಿಗೆ ಚಂದಾಸವಲತ್ತು ಅನ್ವಯಿಸುವದಿಲ್ಲ. ಅವನ್ನು ಮುಖಬೆಲೆ ಕೊಟ್ಟು ಕೊಳ್ಳಬೇಕಾಗುವದು.

ಗ್ರಂಥಮಾಲೆಗೆ ಒಂದೇ ಸಲಕ್ಕೆ **೧೫೦ ರೂಪಾಯಿಗಳನ್ನು** ಸಲ್ಲಿಸಿ **ಆಜೀವಚಂದಾದಾರರಾಗಬಹುದು.** ಅವರಿಗೆ ಅವರ ಆಜನ್ಮ **ಪರ್ಯಂತ** ಗ್ರಂಥಮಾಲೆಯಲ್ಲಿ ಪ್ರಕಟವಾಗುವ ಗ್ರಂಥಗಳನ್ನು ಹಾಗೆಯೆ

ಸಲ್ಲಿಸಲಾಗುವದು. ಮತ್ತು ಗ್ರಂಥಮಾಲೆಯ ಬಿಡಿಮುತ್ತುಗಳನ್ನು ವಿಶೇಷ ಸವಲತ್ತಿನಿಂದ ಅವರಿಗೆ ಪೂರೈಸಲಾಗುವದು.

ಗ್ರಂಥಮಾಲೆಯ ವಾರ್ಷಿಕಚಂದಾ **ಎಂಟು ರೂಪಾಯಿ (೮-೦-೦)** ಮಾತ್ರ ಇದೆ.

ಗ್ರಂಥಮಾಲೆಯ ಕಾರ್ಯಾಲಯದಲ್ಲಿಯೆ ಬಂದು ಪುಸ್ತಕಗಳನ್ನು ತೆಗೆದುಕೊಂಡು ಹೋಗಲಪೇಕ್ಷೆಯುಳ್ಳವರಿಗೆ ಮಾತ್ರ ಆರು ರೂಪಾಯಿ ಎಂಟಾಣೆ (೬—೮—೦) ತೆಗೆದುಕೊಳ್ಳಲಾಗುವದು.

ಗ್ರಂಥಮಾಲೆಯಿಂದ ಒಂದು ವರ್ಷದಲ್ಲಿ ಕ್ರಾ. ಅ. ೧೦೦೦ ಪುಟಗಳಷ್ಟು ಸರಸಸಾಹಿತ್ಯವನ್ನು ಗ್ರಾಹಕರಾದವರಿಗೆ—ಈಗ ಹೆಚ್ಚಿದ ಅಂಚೆವೆಚ್ಚವನ್ನು ನೆನೆದು—**ಎರಡು ಕಂತುಗಳಲ್ಲಿ** ಮಾತ್ರ ಎಲ್ಲ ಗ್ರಂಥಗಳನ್ನು ಸಲ್ಲಿಸಲಾಗುವದು.

ಆಯಾ ವರ್ಷದಲ್ಲಿ ಪ್ರಕಟವಾಗುವ **ಗ್ರಂಥಗಳ ಸಂಖ್ಯೆಯು ಅವುಗಳ ಪುಟಸಂಖ್ಯೆಯಿಂದ** ಹೆಚ್ಚುಕಡಿಮೆಯಾಗಬಹುದು.

ಹಿಂದಿನ ಗ್ರಂಥಗಳಿಗೆ 'ಬೇಡಿಕೆ' ಯನ್ನು ಕೊಡುವಾಗ **'ಸದ್ಯಕ್ಕೆ ಮಾರಾಟಕ್ಕೆ ದೊರೆಯುವ ಗ್ರಂಥಗಳ'** ಪಟ್ಟಿಯೊಳಗಿಂದಲೇ ಆಯ್ದು **ಕೊಡಬೇಕಾಗಿ ವಿನಂತಿ.**

ಪುಸ್ತಕ ವ್ಯಾಪಾರಿಗಳು ತಮ್ಮ ಬೇಡಿಕೆಯನ್ನು ಕಳಿಸುವದರ ಜೊತೆಗೆ ಮುಂಗಡ ಹಣವನ್ನೂ ಕಳಿಸಬೇಕಾಗುವದು.

ಸಾಮಾನ್ಯವಾಗಿ ಅವರ ಬೇಡಿಕೆಯ ಒಟ್ಟು ಬೆಲೆಯ ಮೇಲೆ ೧೮ಕ್ಕೆ ಕಮಿಶನ್ ಕೊಡಲಾಗುವದು.

**೧೦೦ ರೂಪಾಯಿಗಳ ಮೇಲ್ಪಟ್ಟು ಬೇಡಿಕೆ ಕಳುಹಿಸಿದಲ್ಲಿ** ೨೫% ಕಮಿಶನ್ ಕೊಡಲಾಗುವದು.

**ಪ್ಯಾಕಿಂಗ್**, ಅಂಚೆವೆಚ್ಚ **ಪ್ರತ್ಯೇಕ.**

**ವಿಳಾಸ:**
ಸಂಪಾದಕ
ಮನೋಹರ ಗ್ರಂಥಮಾಲಾ
ಧಾರವಾಡ.

# ಸದ್ಯಕ್ಕೆ ಮಾರಾಟಕ್ಕೆ ದೊರೆಯುವ ಗ್ರಂಥಗಳು

**ಕಾದಂಬರಿಗಳು :**

| | | | | | |
|---|---|---|---|---|---|
| ೧ ಧರ್ಮಸೆರೆ | ಜಡಭರತ | —೨ | ೦ | ೦ |
| ೨ ನಿಸರ್ಗ | ಮಿರ್ಜಿ ಅಣ್ಣಾರಾಯರು | —೩ | ೮ | ೦ |
| ೩ ರಾಷ್ಟ್ರಪುರುಷ | ,, ,, | —೮ | ೦ | ೦ |
| ೪ ಅನಂತ | ಸತ್ಯಬೋಧ | —೧ | ೪ | ೦ |
| ೫ ಭಗ್ನಮಂದಿರ | ಹೇಮಂತ | —೪ | ೮ | ೦ |
| ೬ ಅನ್ನ | ರಂ. ಶ್ರೀ. ಮುಗಳಿ | —೪ | ೦ | ೦ |
| ೭ ಕಾರಣ ಪುರುಷ | ,, ,, | —೧ | ೮ | ೦ |
| ೮ ಗಂಗಾಸಾನಿ | ವರಗಿರಿ | —೧ | ೧೪ | ೦ |
| ೯ ಮಾದನ ಮಗಳು | ಎಂ. ವಿ. ಸೀ. | —೬ | ೦ | ೦ |
| ೧೦ ಮುನಿಯನ ಮಾದರಿ | ಕೆ. ಎ. ಎನ್. ರಾವ್ | —೨ | ೧೨ | ೦ |
| ೧೧ ಮೋದಿನಾಪುರದ ಮಲ್ಲಿ | ಗುರುರಾಜ ಜೋಶಿ | —೨ | ೧೨ | ೦ |
| ೧೨ ಔರಂಗಜೇಬ | ಕೆರೂರ ವಾಸುದೇವಾಚಾರ್ಯರು | —೩ | ೦ | ೦ |
| ೧೩ ವಾಲ್ಮೀಕಿ ವಿಜಯ | ,, ,, | —೧ | ೦ | ೦ |
| ೧೪ ಯವನ ಸೈರಂಧ್ರಿ | ,, ,, | —೨ | ೪ | ೦ |
| ೧೫ ಇಂದ್ರಚಾಪ | ರಂಗರಾವ ತಲ್‌ಚೇರಕರ | —೨ | ೮ | ೦ |
| ೧೬ ಎರಡನೆಯ ಸಂಬಂಧ | ಎನ್ಕೆ. ಕುಲಕರ್ಣಿ | —೩ | ೦ | ೦ |
| ೧೭ ಮರ್ಯಾದೆ-ಮಹಲು | ಅಶ್ವತ್ಥ | —೩ | ೮ | ೦ |
| ೧೮ ಗೃಹದಾರಣ್ಯಕ | ನಾ. ಕಸ್ತೂರಿ | —೧ | ೮ | ೦ |

**ನಾಟಕಗಳು :**

| | | | | |
|---|---|---|---|---|
| ೧೯ ಎತ್ತಿದ ಕೈ | ರಂ. ಶ್ರೀ. ಮುಗಳಿ | —೧ | ೧೪ | ೦ |
| ೨೦ ಯುಗಾಂತರ | ವಿ. ಕೃ. ಗೋಕಾಕ | —೦ | ೧೨ | ೦ |
| ೨೧ ಬಿತ್ತಿದ ಬೆಳೆ | ಶಿವರಾಮ ಕಾರಂತ | —೧ | ೦ | ೦ |
| ೨೨ ವೇಣುಮಾನ | ಶ್ರೀಮತಿ ಪ. ಸೀತಾದೇವಿ | —೦ | ೧೨ | ೦ |
| ೨೩ ಮಗು | ಕೆ. ಎ. ಎನ್. ರಾವ್ | —೧ | ೮ | ೦ |
| ೨೪ ಹೊಸ ಸಂಸಾರ | ದ. ರಾ. ಬೇಂದ್ರೆ | —೨ | ೮ | ೦ |
| ೨೫ ಭಾಗ್ಯಶ್ರೀ | ಲ. ಜಿ. ಬೇಂದ್ರೆ | —೧ | ೦ | ೦ |
| ೨೬ ವಿಮರ್ಶಕ ವೈದ್ಯ | ವಿ. ಕೃ. ಗೋಕಾಕ | —೦ | ೬ | ೦ |
| ೨೭ ನಲ-ದಮಯಂತಿ | ಕೆರೂರ ವಾಸುದೇವಾಚಾರ್ಯರು | —೧ | ೮ | ೦ |
| ೨೮ ಪತಿತೋದ್ಧಾರ | ಎನ್ಕೆ ಹುಯಿಲಗೋಳ | —೧ | ೮ | ೦ |

## ಸಣ್ಣ ಕತೆ, ಲಲಿತಪ್ರಬಂಧಗಳು :

| | | | | | |
|---|---|---|---|---|---|
| ೨೯ | ಕುರಿಹಿಂಡು | ಜಲಧರ | —೨ | ೮ | ೦ |
| ೩೦ | ಹೂಬಾಣಗಳು | ಪ. ರಮಾನಂದ | —೩ | ೦ | ೦ |
| ೩೧ | ಜಡಭರತನ ಕನಸುಗಳು | ಜಡಭರತ | —೧ | ೮ | ೦ |
| ೩೨ | ಪ್ರೇಮವಿಜಯ | ಕೆರೂರ ವಾಸುದೇವಾಚಾರ್ಯರು | —೨ | ೮ | ೦ |
| ೩೩ | ಬೆಳಗಿದ ದೀಪಗಳು | " " | —೧ | ೧೨ | ೦ |
| ೩೪ | ತೊಳೆದ ಮುತ್ತು | " " | —೩ | ೨ | ೦ |
| ೩೫ | ಬಹುಮಾನ ಪಡೆದ ಬರಹಗಳು | ವಿವಿಧ ಲೇಖಕರು | —೧ | ೧೩ | ೦ |
| ೩೬ | ಚೀನದ ಬಾಳು—ಬದುಕು | " " | —೭ | ೦ | ೦ |
| ೩೭ | ಬಾಳ--ಹೋಳಿ | ಅಶ್ವತ್ಥ | —೨ | ೮ | ೦ |
| ೩೮ | ಮಾಲಾ ಮತ್ತು ಇತರ ಕತೆಗಳು | ಶ್ರೀಮತಿ ಕಾತ್ಯಾಯಿನಿ | —೨ | ೦ | ೦ |

## ಕಾವ್ಯಗಳು :

| | | | | | |
|---|---|---|---|---|---|
| ೩೯ | ಗರಿ | ಅಂಬಿಕಾತನಯದತ್ತ { ಸಾದಾ | —೨ | ೦ | ೦ |
| | | ಒಳ್ಳೇ ಕಾಗದ | —೨ | ೮ | ೦ |
| ೪೦ | ಸಖೀಗೀತ | " " | —೨ | ೮ | ೦ |
| ೪೧ | ಬಾಸಿಗ | ರಂ. ಶ್ರೀ. ಮುಗಳಿ | —೧ | ೯ | ೦ |
| ೪೨ | ಸಮುದ್ರ ಗೀತಗಳು | ವಿ. ಕೃ. ಗೋಕಾಕ | —೧ | ೪ | ೦ |
| ೪೩ | ಬಾಳ ದೇಗುಲದಲ್ಲಿ | " " | —೩ | ೮ | ೦ |
| ೪೪ | ಮಹಾಯುದ್ಧ | ಕೆ. ಎ. ಎನ್. ರಾವ್ | —೧ | ೮ | ೦ |

## ವಿಮರ್ಶಾತ್ಮಕ ಗ್ರಂಥಗಳು :

| | | | | | |
|---|---|---|---|---|---|
| ೪೫ | ಸಾಹಿತ್ಯ ಮತ್ತು ವಿಮರ್ಶೆ | ದ. ರಾ. ಬೇಂದ್ರೆ | —೧ | ೮ | ೦ |
| ೪೬ | ದತ್ತವಾಣಿ | ಮಿರ್ಜಿ ಅಣ್ಣಾರಾಯರು | —೧ | ೪ | ೦ |
| ೪೭ | ಮಾತೃವಾಣಿ | ಶಿವ ಮಧುರಚೆನ್ನ | —೧ | ೪ | ೦ |
| ೪೮ | ಯುಗಪ್ರವರ್ತಕ ಬಸವಣ್ಣ | ಚಿಂತಾಮಣಿ | —೧ | ೪ | ೦ |
| ೪೯ | ಕವಿ—ಕಾವ್ಯದೃಷ್ಟಿ | ವೀ. ಸೀ. | —೧ | ೮ | ೦ |

# ಹಿಂದಿನ ವರ್ಷಗಳಲ್ಲಿ ಹೊರಟ ಗ್ರಂಥಗಳು

## ೧೯೪೯ ಅಗಸ್ಟದಿಂದ ೧೯೫೦ ಜುಲೈ ವರೆಗಿನ ಒಂದು ವರ್ಷದಲ್ಲಿ ಶತಗ್ರಂಥಪೂರ್ತಿಯ ನೆನಪಿಗಾಗಿ ಪ್ರಕಟವಾದ ಗ್ರಂಥಗಳು.

| | | | | |
|---|---|---|---|---|
| ೯೯ | ಜಡಭರತನ ಕನಸುಗಳು .... | ಜಡಭರತ | ೧೩೭ | ೧-೮-೦ |
| ೧೦೦ | ಗಂಗಾಸಾನಿ (ಕಾದಂಬರಿ) .... | ವರಗಿರಿ | ೧೬೮ | ೧-೧೪-೦ |
| ೧೦೦ | ಮಗು (ನಾಟಕ) .... | ಅಶ್ವತ್ಥ | ೧೦೫ | ೧-೮-೦ |
| ೧೦೧ | ಚೀನದಬಾಳು-ಬದುಕು(ಕತೆಗಳು) | ಬೇರೆಬೇರೆಯವರು | ೪೩೩ | ೭-೦-೦ |
| ೧೦೨ | ಮೇದಿನಾಪುರದ ಮಲ್ಲ (ಕಾದಂಬರಿ) | ಗುರುರಾಜ | ೨೧೭ | ೨-೧೨-೦ |
| ೧೦೩ | ಮಾದನ ಮಗಳು (ಕಾದಂಬರಿ) | ಎಂ. ವಿ. ಸೀ. | ೪೦೩ | ೬-೦-೦ |

ಒಟ್ಟು ಕೊಟ್ಟ ಪುಟಗಳು : ೧೪೬೩ ಮುಖ ಬೆಲೆ ೨೦-೧೦-೦

## ೧೯೫೦ ಅಗಸ್ಟದಿಂದ ೧೯೫೧ ಜುಲೈವರೆಗಿನ ಒಂದು ವರ್ಷದಲ್ಲಿ ಪ್ರಕಟವಾದ ಗ್ರಂಥಗಳು

| | | | | |
|---|---|---|---|---|
| ೧೦೪ | ಹೊಸ ಸಂಸಾರ (ನಾಟಕ) .... | ದ. ರಾ. ಬೇಂದ್ರೆ | ೧೮೬ | ೨-೮-೦ |
| ೧೦೫ | ಇಂದ್ರಚಾಪ (ಕಾದಂಬರಿ).... | ರಂಗರಾವ ತಳ್ಳೇರಿ | ೧೮೮ | ೨-೮-೦ |
| ೧೦೬ | ಬಾಳಹೊಳೆ (ಕತೆಗಳು) .... | ಅಶ್ವತ್ಥ | ೨೨೮ | ೨-೮-೦ |
| ೧೦೭ | ಭಾಗ್ಯಶ್ರೀ (ನಾಟಕ) .... | ಎಲ್. ಜೆ. ಬೇಂದ್ರೆ | ೭೭ | ೧-೦-೦ |
| ೧೦೮ | ಎರಡನೆಯ ಸಂಬಂಧ(ಕಾದಂಬರಿ) | ಎನ್ಕೆ ಕುಲಕರ್ಣಿ | ೨೯೦ | ೩-೦-೦ |

ಒಟ್ಟು ಪುಟಗಳು; ೯೬೯ ಮುಖಬೆಲೆ ೧೧-೮-೦

## ೧೯೩೧ ಅಗಸ್ಟದಿಂದ ೧೯೩೨ ಜುಲೈ ವರೆಗಿನ ಒಂದು ವರ್ಷದಲ್ಲಿ ಪ್ರಕಟವಾದ ಗ್ರಂಥಗಳು

೧೦೯, ೧೧೦ ಮರ್ಯಾದೆಮಹಲು (ಕಾದಂಬರಿ) ಅಶ್ವತ್ಥ ೩೫೦ ೩-೮-೦

೧೧೧ ಯವನಸ್ವೈರಂಧ್ರಿ.... ಕೆರೂರ ವಾಸುದೇವಾಚಾರ್ಯ ೨೨೫ ೨-೪-೦

೧೧೨, ೧೧೩ ಪ್ರೇಮವಿಜಯ (ಐತಿಹಾಸಿಕ ಕಥೆಗಳು) ,, ೨೪೬ ೨-೮-೦

೧೧೪ ಬೆಳಗಿದ ದೀಪಗಳು (ಚಾರಿತ್ರಿಕ ಕತೆಗಳು) ೧೭೦ ೧-೧೨-೦

ಒಟ್ಟು ಕೊಟ್ಟ ಪುಟಗಳು ೯೯೧. ಮುಖಬೆಲೆ ೧೦-೦-೦

## ೧೯೩೨ ಅಗಸ್ಟದಿಂದ ೧೯೩೩ ಜುಲೈ ವರೆಗಿನ ಒಂದು ವರ್ಷದಲ್ಲಿ ಪ್ರಕಟವಾದ ಗ್ರಂಥಗಳು.

೧೧೫, ೧೧೬ ತೊಳೆದ ಮುತ್ತು (ಬೆಳ್ಳೀಚಿಕ್ಕೆ ಸಹಿತ) ಕೆರೂರವರು ೩೧೦ ೩-೨-೦

೧೧೭ ಸೆರೆಮನೆ (ಸಮರಸವೇ ಜೀವನದ ೬ನೆಯ ಭಾಗ) ೧೩೬ ೧-೮-೦

೧೧೮, ೧೧೯, ೧೨೦ ಪರಿಹಾರ ( ,, ,, ಕೊನೆಯ ಭಾಗ ) ೪೭೨ ೫-೮-೦

ಒಟ್ಟು ಕೊಟ್ಟ ಪುಟಗಳು : ೯೧೮. ಮುಖಬೆಲೆ ೧೦-೨-೦

## ೧೯೩೩ ಅಗಸ್ಟದಿಂದ ೧೯೩೪ ಜುಲೈ ವರೆಗಿನ ಒಂದು ವರ್ಷದಲ್ಲಿ ಪ್ರಕಟವಾಗುವ ಕೆಲ ಗ್ರಂಥಗಳು

೧೨೧ ಮಾಲಾ ಮತ್ತು ಇತರ ಕತೆಗಳು ಕಾತ್ಯಾಯಿನಿ ೨೧೨ ೨-೦-೦

೧೨೨ ಗೃಹದಾರಣ್ಯಕ (ಕಾದಂಬರಿ) ನಾ. ಕಸ್ತೂರಿ .... ೧-೮-೦

೧೨೩ ಪತಿತೋದ್ಧಾರ (ನಾಟಕ) ಎನ್ಕೆ. ಹುಯಿಲುಗೋಳ .... ೧-೮-೦

೧೨೪ ಸರೂ.... (ಕಾದಂಬರಿ) ಶ್ರೀಮತಿ ಚಂಪಕಮಾಲಾ ಅಚ್ಚಿನಲ್ಲಿ

೧೨೫

೧೨೬

